

# ತಳಿರು-ತೋರಣ

(ಸಣ್ಣ ಕತೆಗಳ ಸಂಕಲನ)

ಸಂಪಾದಕ:

ಮ. ವಿ. ನಾಯಕ

ಹಂಸ ಸಾಹಿತ್ಯ ಮಾಲಾ
ನವಕುಸುಮ — ೧



ಹಂಸ ಸಾಹಿತ್ಯ ಮಾಲಾ
:: :: ಲಾಲ್ ಬಾಗ್ :: ::
:: :: ಮುಂಬಯಿ ೧೨ :: ::

# ಮುಮ್ಮಾತು

'ತಳಿರು-ತೋರಣ'ವು ಸಾಹಿತ್ಯಮಂಟಪಕ್ಕೆ ಕಟ್ಟಿದ ಒಂದು ಕಿರಿಯ ಕಾಣಿಕೆ. ಇಲ್ಲಿ ಬಂದಿರುವ ಹತ್ತುಜನ ಕತೆಗಾರರೂ ಹೊಸ ಹುರುಪಿನ ಸಾಹಿತಿಕರು. ಸತ್ವಯುತವಾದ ಬರವಣಿಗೆಯನ್ನು ಜನತೆ ಅವರಲ್ಲಿ ಕಂಡಿದೆ. ಹತ್ತುಜನ ಕತೆಗಾರರು ಕರ್ನಾಟಕದ ಎಲ್ಲಾ ಭಾಗಗಳಿಂದಲೂ ಬಂದವರಾದುದರಿಂದ ಹೊಸ ಪೀಳಿಗೆಯ ಪ್ರಾತಿನಿಧಿಕ ಸಂಗ್ರಹವೆಂದು ತಿಳಿಯಬಹುದಷ್ಟೆ.

ಇಲ್ಲಿ ಬಂದಿರುವ ಕತೆಗಾರರೆಲ್ಲ ಒಂದೇ ಬಳಗದವರಾದುದರಿಂದ 'ಕತೆಗಳನ್ನು ಕೊಟ್ಟದ್ದಕ್ಕೆ ಉಪಕೃತ' ಎಂದು ಹೇಳುವ ಅವಶ್ಯಕತೆ ಎಷ್ಟೂ ಇಲ್ಲ. ಸಂಗ್ರಹದ ವಿಚಾರವೂ ಒಟ್ಟಾಗಿಯೇ ಬೆಳೆದು ಬಂತು. ಅದು ರೂಪುಗೊಳ್ಳುವಾಗಲೂ ಎಲ್ಲರ ಸಹಕಾರವೇ ಕಾರಣವಾಯಿತು. ಸಂಪಾದಕನೆಂಬ ಮಾತು ಇಲ್ಲಿ ನಿಮಿತ್ತಮಾತ್ರವಾಗಿದೆ.

ಇದಕ್ಕೂ ಹೆಚ್ಚಿನ ನೆರವನ್ನು ಗೆಳೆಯ ರಾಘವೇಂದ್ರರು ಕೊಟ್ಟಿರುವುದರಿಂದ, ಪ್ರತ್ಯೇಕವಾಗಿ ಅವರನ್ನು ಹೆಸರಿಸುತ್ತಿದ್ದೇನೆ. ಸಂಗ್ರಹದ ಬಹಿರಂಗದ ಚೆಲುವೆಲ್ಲಾ ಅವರ ಕೈಮಾಡದ ಫಲ. ಒಳಚಿತ್ರಗಳ ಮೂಲಕ ರಸಸ್ವಾದನೆಗೂ ಅನುವುಮಾಡಿಕೊಟ್ಟಿರುವುದರಿಂದ ಅಂತಃಸತ್ವದ ಮೆರುಗನ್ನು ಹೊರಗೆಡಹಿದ್ದಾರೆ. ಕನ್ನಡ ಜನತೆ ರಾಘವೇಂದ್ರರನ್ನು ಬರಿಯ ಚಿತ್ರಕಾರರೆಂದು ಗೌರವಿಸಿದೆ. ಆದರೆ ಅವರು ಒಳ್ಳೆಯ ಸಲಹೆಗಾರರೂ, ವಿಮರ್ಶಕರೂ ಆಗಿರುವರೆಂಬುದು ಅವರ ನಿಕಟ ಪರಿಚಯವಿದ್ದವರಿಗೆ ಮನದಟ್ಟಾಗಿದೆ.

ಮುಂಬಯಿಯ ಮೂರುಲಕ್ಷ ಕನ್ನಡಿಗರಿಗೆ ಗ್ರಂಥಮಾಲೆಯೊಂದೂ ಇಲ್ಲದುದರ ಕೊರತೆಯನ್ನು ಗಮನಿಸಿ ಶ್ರೀ. ವಿ. ಆರ್. ಪ್ರಭು ಅವರು ಹಂಸ ಸಾಹಿತ್ಯ ಮಾಲೆಯನ್ನು ಪ್ರಾರಂಭಿಸಿ ಈ ಸಂಗ್ರಹವನ್ನೇ ಮೊದಲ ಹೂವನ್ನಾಗಿ ಅರಿಸಿದ್ದಾರೆ. ಅವರಿಗೆ ಋಣಿ.

**ಮಾತುಂಗ,**
**೧-೪-೧೯೪೯.**

**ಸಂಪಾದಕ**

# ನಮ್ಮ ಬಳಗ

## ಶ್ರೀ. ಗೋಪೀನಾಥ –

ಪೂರ್ಣ ಹೆಸರು ಗೋಪೀನಾಥ ಕಾಮತ್, ಕಾಸರಗೋಡಿನವರು. ಕತೆಗಾರರಲ್ಲದೆ ಕವನಗಳನ್ನು ರಚಿಸಿ ಹಾಡುವುದರಲ್ಲಿ ಇವರಿಗೆ ಒಲವು. ಅಭಿನಯದಲ್ಲೂ ಅಷ್ಟೆ. ಮುಂಬಯಿಯ ಕನ್ನಡ ಚಟುವಟಿಕೆಗಳಲ್ಲಿ ಶ್ರಮವಹಿಸುತ್ತಿರುವ ಉತ್ಸಾಹೀ ಕಾರ್ಯಕರ್ತರಲ್ಲಿ ಇವರೊಬ್ಬರು.

## ಶ್ರೀ ಪ. ಸು. ಭಟ್ಟ –

ವಿದ್ಯಾರ್ಥಿದೆಸೆಯಲ್ಲೇ ಇದ್ದುಕೊಂಡು ಒಳ್ಳೆಯ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ ಕೆಲವೇ ಜನರಲ್ಲಿ ಶಿರಸಿಯ ಪ. ಸು. ಭಟ್ಟ ಒಬ್ಬರು. ಉತ್ತರ ಕನ್ನಡ ಜಿಲ್ಲೆಯ ಜನಜೀವನವನ್ನು ಚಿತ್ರಿಸುವ 'ಪಡುವಣ' ಅವರ ಪ್ರಥಮ ಕಥಾಸಂಗ್ರಹ 'ಹಕ್ಕಿನ ಹೋರಾಟ'ವೆಂಬ ಇನ್ನೊಂದು ಸಂಕಲನ ಇತ್ತೀಚೆಗೆ ಪ್ರಕಟವಾಗಿದೆ.

## ಶ್ರೀ. ಚಿದಂಬರ ದೀಕ್ಷಿತ –

ಉದಯೋನ್ಮುಖ ಕವಿಗಳೆಂದೇ ಕನ್ನಡ ಜನತೆಗೆ ದೀಕ್ಷಿತರ ಪರಿಚಯ. ಅವರ ಕವನ ಸಂಗ್ರಹ 'ಮುಂಬೆಳಗು' ಆ ಕೆಲಸ ಮಾಡಿದೆ. ಇನ್ನೂ ೩ – ೪ ಸಂಗ್ರಹಗಳು ಪ್ರಕಾಶನಕ್ಕಾಗಿ ಕಾದಿವೆ. ಜೀವನದ ಕಷ್ಟನಿಷ್ಠುರಗಳನ್ನು ಸಹಿಸಿ ಪಕ್ವಹೃದಯಿಗಳಾದ ಅವರು ಒಳ್ಳೆಯ ಕತೆಗಾರರೂ ಅಹುದು. ಶ್ರೀಯುತರು ಧಾರವಾಡದ ಕಾಲೇಜಿನಲ್ಲಿ ಕಲಿಯುತ್ತಿದ್ದಾರೆ.

## ಶ್ರೀ. ಸೇವ ನೇಮಿರಾಜ ಮಲ್ಲ –

ಐದು ವರ್ಷಗಳಿಂದಲೂ ಸಣ್ಣಕತೆ – ಕವನ ಇತರ ಬಿಡಿಬರಹಗಳನ್ನು ಬರೆದು ಮಲ್ಲರು ಪ್ರಸಿದ್ಧಿ ಪಡೆದಿದ್ದಾರೆ. 'ನಿಮ್ಮ ಕತೆಗಳನ್ನು ಕಾಣದ ಕನ್ನಡ ಪತ್ರಿಕೆಯೇ ಇದ್ದಂತಿಲ್ಲವಲ್ಲ' ಎಂದು ಅವರ ದೂರದ ಗೆಳೆಯರು ಒಮ್ಮೆ ಅವರನು ಕೇಳಿದುದು ಬಹುಮಟ್ಟಿಗೆ ಸತ್ಯ. ಬೇಗ ಇವರ ಕಥಾಸಂಗ್ರಹವೊಂದು ಪ್ರಕಟವಾಗಲಿದೆ. ಆಗಾಗ ಇಂಗ್ಲೀಷಿನಲ್ಲಿಯೂ ಬರೆಯುವುದುಂಟು. ಸದ್ಯ ಮದರಾಸಿನಲ್ಲಿದ್ದಾರೆ.

## ಶ್ರೀ. 'ಇಂದಿರಾತನಯ'–

ನಿಜವಾದ ಹೆಸರು ವಾ. ರಾ. ಶಾಮನೆಂದು, ಬೆಂಗಳೂರಿನವರು. ನಮ್ಮ ಈ ಬಳಗದಲ್ಲಿ ಅವರೇ ಅತ್ಯಂತ ಕಿರಿವಯಸ್ಸಿನವರು. ಕತೆಗಳನ್ನಲ್ಲದೆ ಶಿಶುಸಾಹಿತ್ಯದಲ್ಲಿಯೂ ಅಭಿರುಚಿಯುಳ್ಳವರು. ಕನ್ನಡ ಪತ್ರಿಕೋದ್ಯಮವನ್ನು ಧ್ಯೇಯವಾಗಿರಿಸಿಕೊಂಡು, ಆ ದಿಸೆಯಲ್ಲೇ ಈಗ ಮುನ್ನಡೆಯುತ್ತಿದ್ದಾರೆ.

### ಶ್ರೀ. ನಾಗೇಶ ಶಾನಭಾಗ–

ಸಾಹಿತ್ಯಸೇವೆಯಲ್ಲಿ ನಿರ್ದಿಷ್ಟ ಗುರಿಯನ್ನಿಟ್ಟುಕೊಂಡು ಸಾಗಿದ ಶಾನಭಾಗರು ಉತ್ತರ ಕನ್ನಡ ಜಿಲ್ಲೆಯವರು. ವಿವಿಧ ಬಗೆಯ ಇವರ ಬರಹಗಳಲ್ಲಿ 'ಏಕಪಾತ್ರಾಭಿನಯ'ಗಳೂ ಬಹಳ ಮೆಚ್ಚುಗೆ ಪಡೆದಿವೆ. ಹಿಂದೀ, ಮರಾಠಿ ಭಾಷೆಗಳನ್ನು ಅಭ್ಯಸಿಸಿದ್ದಾರೆ. ಸಹೃದಯ ಗೆಳೆಯರೂ ಆಗಿರುವ ನಾಗೇಶರು, ಮೊನೆ ಮೊನೆ ಮುಂಬಯಿಯನ್ನು ಬಿಟ್ಟು, ಮುಂಡಗೋಡಿನಲ್ಲಿ ಕೆಲಸದ ಮೇಲಿದ್ದಾರೆ.

### ಶ್ರೀ. ಐರಣಿ ಶ್ರೀನಿವಾಸ–

ಬರೆದುದೆಲ್ಲಕ್ಕೂ ಬೆಲೆಯನ್ನು ಗಳಿಸುವ ಹೊಸ ಪೀಳಿಗೆಯವರಲ್ಲಿ ಧಾರವಾಡದ ಐರಣಿಯವರಿಗೂ ಒಂದು ಸ್ಥಾನ. 'ಅವರು ಮತ್ತು ದೇವಕಿ' ಎಂಬ ಎರಡು ನೀಳ್ಗತೆಗಳ ಸಂಗ್ರಹ ರಸಿಕ, ವಿಮರ್ಶಕರಿಬ್ಬರಿಂದಲೂ ಮನ್ನಣೆ ಪಡೆದಿದೆ. ಕಥಾವಸ್ತು, ಮನೋವಿಶ್ಲೇಷಣಗಳ ಸುಂದರ ಸಮನ್ವಯ ಇವರ ಬರವಣಿಗೆಯ ವೈಶಿಷ್ಟ್ಯ. 'ಪ್ರಥಮ ಪತಿವ್ರತೆ' ಎಂಬ ಕಥಾಸಂಕಲನ ಬೇಗ ಬರಲಿದೆ. ಬಿ. ಎ. ದಲ್ಲಿ ಕನ್ನಡವನ್ನು ಐಚ್ಛಿಕವಾಗಿ ತೆಗೆದುಕೊಂಡು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದಾರೆ. ಒಳ್ಳೆಯ ವಿಮರ್ಶಕರೂ ಅಹುದು. ಸದ್ಯ ಮುಂಬಯಿಯಲ್ಲಿ ಪುಸ್ತಕಾಲಯ ಶಾಸ್ತ್ರದ ವಿಶೇಷ ಅಭ್ಯಾಸ ಮಾಡುತ್ತಲಿದ್ದಾರೆ.

### ಶ್ರೀ. ಕು. ಶಿ. ಹರಿದಾಸ ಭಟ್ಟ–

ಉಡುಪಿಯ ಹರಿದಾಸ ಭಟ್ಟರು ಪ್ರೇಮಚಂದರ ಕಾದಂಬರಿಯೊಂದನ್ನು 'ರಮಾನಾಥ' ಎಂಬ ಹೆಸರಲ್ಲಿ ಅನುವಾದಿಸಿ, ಓದುಗರಿಗೆ ಈಗಾಗಲೇ ಪರಿಚಿತರಾಗಿದ್ದಾರೆ. ಶಿಕ್ಷಣವನ್ನು ಹೆಚ್ಚಾಗಿ ಪಡೆಯಬೇಕೆಂಬ ಇವರ ಮನೋವೃತ್ತಿ. ಹಲವು ತೊಡರುಗಳನ್ನು ಎದುರಿಸಬೇಕಾಯಿತು. ವಿದ್ಯಾರ್ಥಿದೆಸೆ ಬಿಟ್ಟು ನೌಕರಿ ಮಾಡಬೇಕಾಯಿತು. ಈಗ ಮತ್ತೆ ಮದರಾಸ ಕಾಲೇಜಿನಲ್ಲಿ ಅಭ್ಯಾಸಕ್ಕಿದ್ದಾರೆ. 'ವಿದ್ವಾನ್' ಪರೀಕ್ಷೆಯಲ್ಲಿ ಮೇಲ್ದರಗತಿಯಲ್ಲಿ ಉತ್ತೀರ್ಣರಾದುದು ಅವರ ವ್ಯಾಸಂಗೀ ವೃತ್ತಿಗೆ ನಿದರ್ಶನ. 'ವಿಶಾರದ'ರೂ ಆಗಿದ್ದಾರೆ.

### ಶ್ರೀ. ವಿ. ವ್ಯಾಸರಾಯ ಬಲ್ಲಾಳ್–

ನಮ್ಮ ಬಳಗದಲ್ಲಿ, ಎಲೆಮರೆಯ ನಕ್ಷತ್ರದ ಹಾಗೆ ಬೆಳಗುವ ಬಲ್ಲಾಳರು ಉಡುಪಿಯವರು. ಸದ್ಯ ಮುಂಬಯಿಯಲ್ಲಿ 'ನುಡಿಕೂಟ'ದ ನುರಿತ ಬರಹಗಾರರಾಗಿ ಪ್ರಮುಖ ಕಾರ್ಯಕರ್ತರಾಗಿ ಇದ್ದಾರೆ. ಅವರ ಸ್ವಭಾವಸೌಜನ್ಯ, ಅವರ ಮಿದು ಮನಸ್ಸು ನಿಚ್ಚಳವಾಗಿ ಅವರ ಕತೆಗಳಲ್ಲಿ ತೂರಿಕೊಂಡು ಬಂದಿದೆ. ಹಾಗೆಂದು ರಾಜಕೀಯ ಲೇಖನಗಳಲ್ಲಿ, ಅವರ ಲೆಕ್ಕಣಿ ಹರಿತವಾಗದೆ ಇಲ್ಲ. ಇದರಿಂದಾಗಿ

ಸರಕಾರ ಒಂದುಸಲ ಎಚ್ಚತ್ತು, ಎಚ್ಚರಿಕೆ ಕೊಡಬೇಕಾಗಿ ಬಂದಿತು. ಕೆಲವು ಕತೆಗಳು ಪತ್ರಿಕೆಗಳಲ್ಲಿ ಬಂದಿವೆ. ಓದಬೇಕಾದುವು ಬಹಳ ಇವೆ. ಬೇಗನೇ 'ಬದುಕಿನ ಆದರ್ಶ'ವೆಂಬ ಸಂಕಲನ ಗೆಳೆಯರ ಕಟ್ಟಿಗೊಳಗಾಗಿ ಹೊರಡಲಿದೆ.

## ಶ್ರೀ. ವು. ವಿ. ನಾಯಕ –

ಇವರದೂ ಬಹುಮುಖವಾದ ಸಾಹಿತ್ಯ ರಚನೆ ಕತೆಗಳಂತೂ ಸರಿಯೆ; ರಾಜಕೀಯ ಲೇಖನಗಳೂ, ಕೃತಿವಿಮರ್ಶೆಗಳೂ, ವ್ಯಕ್ತಿಚಿತ್ರಗಳೂ, ಅವರ ಅಭ್ಯಾಸ, ಅನುಭವಗಳನ್ನು ಓದುಗರ ಗಮನಕ್ಕೆ ತಂದುಕೊಡಬಲ್ಲವು. ಸಾಹಿತ್ಯದ ಸಾಂಘಿಕ ಕಾರ್ಯದಲ್ಲಿ ವಿಶೇಷ ಆಸಕ್ತಿಯಿರುವುದರ ಫಲವಾಗಿ, ಪುಸ್ತಕ ಪ್ರಕಟನೆಯಂತಹ ರಚನಾತ್ಮಕ ಕೆಲಸವೂ ಇವರಿಂದ ಜರಗುತ್ತಲಿದೆ.

# ಅನುಕ್ರಮಣಿಕೆ



# ವಿಧಿತಂದ ವಧು

**ಗೋಪೀನಾಥ**

ಜೋಯಿಸರು ಮತ್ತೊಮ್ಮೆ ನಶ್ಯ ಮೂಗಿಗೇರಿಸಿದರು!

ಸೋಮೇಶರಾಯರು ಒಳ್ಳೆಯ ಹುರುಪಿನಿಂದಲೇ ಕೈಯಲ್ಲಿನ ನೋಟಿನ ಕಟ್ಟನ್ನು ಬಿಚ್ಚಿ ಎಣಿಸತೊಡಗಿದರು. ಒಂದು, ಎರಡು, ಮೂರು, ನಾಲ್ಕು... ಐದು ಸಾವಿರ ರೂಪಾಯಿಗಳು!

ಐದು ಸಾವಿರ ನಗದು! ಉಳಿದೈದು ಮತ್ತೆ ಹೆಣ್ಣಿನ ಜತೆ ಮನೆಸೇರಲಿದೆ. ಒಟ್ಟು ಹತ್ತು ಸಾವಿರ ರೂಪಾಯಿ ವರದಕ್ಷಿಣೆ ಏನು ಕಡಿಮೆಯೆ?

ಆದೇ ಅವರ ಮುಖದಲ್ಲಿ ಗೆಲುವಿನ ಛಾಯೆ ಮೂಡಿ ತೋರುತ್ತಿತ್ತು. ಲೋಕದಲ್ಲಿ ತನ್ನಷ್ಟು ಬುದ್ಧಿವಂತ ಯಾರೂ ಇಲ್ಲವೆಂದೇ ಅವರು ಗ್ರಹಿಸಿದ್ದಿರಬೇಕು!

ರಾಯರೆಂದರು; "ಇನ್ನು ಹೆಚ್ಚು ವಿಳಂಬ ಮಾಡಬಾರದು ಜೋಯಿಸರೇ, ನಿಮಗೆ ತಿಳಿದೇ ಇದೆ. ಮದುವೆ ನಾಳಿನ ಲಗ್ನಕ್ಕೇ ಮುಗಿದುಹೋಗಲಿ. ಮತ್ತೆಂದರೆ ...... ಹಾಗೇನೂ ಇಲ್ಲಾ......ಆದರೆ ನಮ್ಮ ಸುಂದರಾಗೆ ರಜೆಯಿರಬೇಕು ನೋಡಿ, ಈಗ ಹೇಗೂ ಬಂದಿದ್ದಾನಲ್ಲ, ಈ ರಜೆಯಲ್ಲಿ ಆಗಿಹೋಗಲಿ....ಅಲ್ಲ, ಆಚಾರ್ರೆ?"

ಜೋಯಿಸರು ನೋಟಿನೆಡೆ ಮನನೆಟ್ಟಿದ್ದರು. ರಾಯರ ಮಾತು ಪೂರಾ ಕೇಳಿರಲಿಲ್ಲ. ಆದರೂ ಆಳ ನೋಡಿ ಗಾಳಹಾಕುವ ಜೋಯಿಸರಂಥವರಿಗೆ ರಾಯರ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟವಾಗಿರಲಿಲ್ಲ.

"ಅದನ್ನೇ ನಾನೂ ಹೇಳೋದು, ರಾಯರೆ." ಜೋಯಿಸರೆಂದರು, "ಮದುವೆ ಬೇಗ ಆಗಬೇಕು ತಾನೆ? ಬೀಗರೂ ಅದೇ ಹೇಳುತ್ತಾರೆ. ಬೆಳೆದ ಹೆಣ್ಣು, ಹೆಚ್ಚು ಕಾಲ ಮನೆಯಲ್ಲಿರಗೊಡಬಾರದಂತೆ! ನಾನೆಲ್ಲಾ ವ್ಯವಸ್ಥೆ

ಮಾಡ್ತೇನೆ. ಆ ಯೋಚನೆ ಬಿಡಿ.....ಒಂದು ಮಾತು ನಿಮ್ಮ ಹುಡುಗನ ಹತ್ತಿರ ಕೇಳಿ....."

"ಅವನನ್ನೇನು ಕೇಳೋದು, ಜೋಯಿಸರೆ? ಅವನೇನು ಹೇಳೋದು, ಪಾಪ, ತಾಯಿಯಿಲ್ಲದ ತಬ್ಬಲಿ ನನ್ನ ಮಾತನ್ನು ಮೀರುವನೇ ಅತ! ಮದುವೆ ಗಂತೂ ಒಪ್ಪಿದ್ದಾನೆ. ಯಾವಾಗ ಮಾಡಿದರೇನಂತೆ?.....ಸರಿ, ಹಾಗಾದರೆ ಎಲ್ಲಾ ನಿಮ್ಮ ಮೇಲೆ ಭಾರಹಾಕಿದ್ದೇನೆ.....ನಡೆಸಿಕೊಡಬೇಕು. ..."

"ನಮ್ಮದೇನು ಬಂತು ಅದರಲ್ಲಿ? ಎಲ್ಲಾ ದೇವರಿಚ್ಛೆ" ಎಂದು ಜೋಯಿಸರು ಏಳಲು ತವಕಿಸುತ್ತಿದ್ದರೂ ಅವರ ದೃಷ್ಟಿ ರಾಯರ ಕೈಯೊಳಗಿನ ನೋಟಿನ ಕಟ್ಟನ್ನು ಬಿಟ್ಟು ಕದಡಲಿಲ್ಲ. ತುಸು ಸಂಕೋಚದಿಂದಲೇ ಜೋಯಿಸರು, "ರಾಯರೇ.....!" ಎಂದರು. ಏನೋ ಗುಟ್ಟಿನಲ್ಲಿ ಪಿಸುಪಿಸು ಮಾತನಾಡಿದರು.

"ಓ, ಅಷ್ಟಕ್ಕೇ ನೀವು ಬಹಳ ಸಂಕೋಚಪಡುತ್ತೀರಲ್ಲ? ಎಷ್ಟು ಬೇಕು, ಮುನ್ನೂರೇ.....ತಗೊಳ್ಳಿ" ಎಂದು ಸೋಮೇಶರಾಯರು ನೂರು ರೂಪಾಯಿಗಳ ಮೂರು ನೋಟನ್ನು ಜೋಯಿಸರ ಕೈಗಿತ್ತರು. ಹಸನ್ಮುಖಿಯಾಗಿ ಜೋಯಿಸರು ಮಗದೊಮ್ಮೆ ನಶ್ಯ ಮೂಗಿಗೇರಿಸಿದರು!

ಹೊರಗೆ ಹೋಗಿದ್ದ ಸುಂದರ ಈಗ ತಾನೆ ಬಂದ. ಜೋಯಿಸರ ದೃಷ್ಟಿ ಅವನೆಡೆ ಹರಿಯಿತು.

"ಬಂದೆಯಾ ಸುಂದರೂ; ಈಗತಾನೆ ನಿನ್ನ ವಿಷಯಾನೆ ಎತ್ತಿದ್ದೆ. ಲಗ್ನ ಈ ತಿಂಗಳಾಖೇರಿಗೇ ಮುಗಿಸಬೇಕೆಂದು ನಿನ್ನ ಮಾವನ ಮನಸ್ಸು. ಹೂಂ!.. .. ಹುಶಾರಾಗಿರು...." ಎಂದು ನಕ್ಕು ನುಡಿದರು. ಸುಂದರ ಸುಮ್ಮಗೆ ಮುಗುಳು ನಗೆ ಬೀರಿದ. ಜೋಯಿಸರಾಗ, "ದೇವರು ಒಳ್ಳೇದು ಮಾಡಲಪ್ಪಾ ನಿನಗೆ" ಎಂದು ಹರಸಿ ಹೊರಡಲನುವಾದರು.

ರಾಯರೂ ಎದ್ದು, "ನೋಡು ಸುಂದರೂ, ಇವತ್ತೇ ನಿನ್ನ ಆಫೀಸಿಗೆ ರಜೆ ಮುಂದರಿಸುವ ಹಾಗೆ ಅರ್ಜಿ ಹಾಕಿಬಿಡು. ಮದುವೆ ಮುಗಿಸಿಯೇ ಮುಂಬಯಿಗೆ ತೆರಳುವಿಯಂತೆ" ಎಂದು ಸೂಚಿಸಿದರು. ಜೋಯಿಸರು ಅವಕ್ಕೆ ಪಿಟೀಲು ಬಾರಿಸದಿರಲಿಲ್ಲ.

ಸುಂದರೂ ಏನೂ ಹೇಳದೆ ಸುಮ್ಮನೆ ಸನ್ನೆಯಲ್ಲೆ ಸಮ್ಮತಿ ಸೂಚಿಸಿದ. ಇವರ ಮಾತಿನ ಒಳಗುಟ್ಟು ಅವನದಾಗಲೇ ಅರಿತಿದ್ದ. ಅದರೂ ಅವ ನಕ್ಕು ಸುಮ್ಮನಾದ. ಅದು ಅವನ ಸ್ವಭಾವವಲ್ಲ; ಮನಸ್ಸಿನ ನಿರ್ಧಾರವೇ ಹಾಗಿತ್ತು.

೨

ಅಂದು ಜೋಯಿಸರು ಹುಡುಗಿಯನ್ನು ತೋರಿಸಲೆಂದು ಸುಂದರನ ಕರೆದಾಗ ಆತ ತುಸು ಹಿಂಜರಿದಿದ್ದ. ಹೋಗಲೋ ಬೇಡವೋ ಎಂದವನ ಮನಸ್ಸು ತೊಳಲಾಡುತ್ತಿತ್ತು. ಒಂದೆಡೆ ಆಸೆ ಅವನಿಗೆ ಹುರುಪು ಕೊಟ್ಟಿದ್ದರೆ ಇನ್ನೊಂದೆಡೆ ರಾಯರ ಮಾತಿನಿಂದ ನಿರಾಶನಾಗುತ್ತಿದ್ದ.

ಸೋಮೇಶರಾಯರು ಜೋಯಿಸರನ್ನೇ ಸಂಬೋಧಿಸಿ ನುಡಿದಿದ್ದರು. "ಅವನೇನು ಶೋಭಾನ ನೋಡಿಲ್ಲವೇ ಹಿಂದೆ? ಈಗ ಪುನಃ ಯಾಕೆ, ಜೋಯಿ ಸರೆ? ಆತ ಆಗಲೇ ಒಪ್ಪಿದ್ದಾನಲ್ಲಾ!"

ಹೌದು! ಸುಂದರ ಮದುವೆಗೆ ಒಪ್ಪಿದ್ದ. ಈಗಲೂ ಅವನಿಗದು ಸಮ್ಮತವಿದೆ. ಈ ಹಿಂದೆಯೇ ಅವನು ಶೋಭಾನ್ನ ಹಲವು ಬಾರಿ ಕಂಡಿದ್ದ. ಅವಳ ಬಗ್ಗೆ ಅರಿತಿದ್ದ. ಒಂದೇ ಊರಿನವರೆಂದಮೇಲೆ, ತಿಳಿಯದಿರುವುದುಂಟೆ?

ಶೋಭಾ ಅತ್ಯಂತ ಚೆಲುವೆ; ರೂಪಕ್ಕೆ ತಕ್ಕ ಗುಣ. ಅಂಥವಳನ್ನು ಮದುವೆಯಾಗಲು ಯಾರೂ ಒಪ್ಪಲೇಬೇಕು. ಆದರೆ.....? ಆದರೆ ಆ ಅಪರಿ ಮಿತ ರೂಪ ಬ್ರಹ್ಮ ಕುವರಿಯಾದ ಸರಸ್ವತಿಗೇ ಮತ್ಸರವನ್ನುಂಟುಮಾಡಿರ ಬೇಕು; ಅವೇ ಅವಳನ್ನೊಲಿಯಲಿಲ್ಲ ಆಕೆ. ಶೋಭಾ ಸುಂದರಿ, ಆದರೆ ಮೂಕಿ! ಮಾತಿಲ್ಲ; ಮೌನ. ಈ ಮೂಕಿಯ ವಿವಾಹ ತನ್ನೊಡನಾಗಬೇಕೆಂದು ಸೋಮೇಶರಾಯರ ಇಷ್ಟೆಲ್ಲ ಪ್ರಯತ್ನಗಳು! ಎಲ್ಲಿ ತಾನು ಒಲ್ಲೆನೆಂದು ಹೇಳು ವನೋ ಎಂಬ ಹೆದರಿಕೆಯಿಂದಲೇ ಇದೇ ತಿಂಗಳಾಖೇರಿಗೆ ಆಗಬೇಕೆಂದುದು. ಯಾವುದಕ್ಕೂ ಅವನು ಅಡ್ಡಿ ಬಂದಿರಲಿಲ್ಲ. ಮೂಕಿಯೊಡನೆ ತನ್ನ ವಿವಾಹ ಸುಂದರನಿಗೆ ಸಮ್ಮತವಿತ್ತು. ಅದು ಹತ್ತು ಸಾವಿರ ನಾಣ್ಯಗಳ ಮೋಹದಿಂದಲ್ಲ ಮಾತ್ರ! ಆ ಹಣ ತನ್ನ ಪಾಲಿನದ್ದಲ್ಲವೆಂದು ಸುಂದರನೂ ಮನಗಂಡಿದ್ದ. ರಾಯರು ಇಲ್ಲದಿದ್ದರೆ ಅವನಿಗೆ ಈ ಮದುವೆ ಮಾಡಿಸುತ್ತಿದ್ದರೆ....?

ಹಾಗಾದರೆ ಸುಂದರನೇಕೆ ಒಪ್ಪಬೇಕಿತ್ತು?

ಅದೇ ಪ್ರಶ್ನೆಯನ್ನು ಅವನು ತನ್ನಲ್ಲೇ ಹಲವು ಬಾರಿ ಕೇಳಿಕೊಂಡಿದ್ದ. ಕೊನೆಗೆ ಅವನಿಗೇನನಿಸಿತೋ ತನ್ನ ಮನೋನಿರ್ಧಾರವನ್ನು ಬದಲಿಸಲಿಲ್ಲ. ಸುಂದರ ಸುಶಿಕ್ಷಿತ ತರುಣ. ಅವನ ಶಿಕ್ಷಣ ಪದವೀಧರನಾಗುವಂತೆ ಮಾಡಿ ದರೂ, ಅವನ ಅನುಭವ ಪೂರ್ಣ ತಿಳುವಳಿಕೆ ಅವನನ್ನು ಮೇಲ್ಮಟ್ಟಕ್ಕೆ

ತಂದಿಟ್ಟಿತ್ತು. ಚಿಕ್ಕಂದಿನಲ್ಲೇ ಸುಂದರ ತಂದೆತಾಯಿಯರನ್ನು ಕಳೆದು ಕೊಂಡಿದ್ದ. ಅಂತೆಯೇ ಸೋದರಮಾವ ಸೋಮೇಶರಾಯರೇ ಅವನ ಪಾಲಕರಾದವರು. ಅವರಿಂದಲೇ ಆತನಿಗೆ ತಕ್ಕಮಟ್ಟಿಗೆ ಶಿಕ್ಷಣ ದೊರೆಯಿ ತೆನ್ನಬೇಕು. ಮನೆಯಲ್ಲಿ ರಾಯರ ಹೆಂಡತಿ, ಮಕ್ಕಳಿಂದ ಅವನಿಗೆ ಬಹಳ ಕಷ್ಟವೆನಿಸಿದರೂ, ರಾಯರು ತೋರಿದ ಪ್ರೇಮ, ಸಲಿಗೆ ಅವನಲ್ಲಿ ಹೆಚ್ಚು ಗೌರವ ಕ್ಕೆಡೆ ಕೊಟ್ಟಿತ್ತು. ತಾನೆಷ್ಟೆಂದರೂ ಅನಾಥ ಬಾಲಕ, ಅನ್ಯರ ಕಠೋರ ನುಡಿ, ನಡೆಗಳನ್ನು ತಾಳ್ಮೆಯಿಂದ ಕೇಳಿರಬೇಕಾದುದೆಂದು ಬಗೆದು, ತನಗಾವ ವಿಧದ ಕಷ್ಟಗಳೊದಗಿದರೂ ರಾಯರೊಡನೆ ದೂರುತ್ತಿರಲಿಲ್ಲ. ಆದರೆ ಸೋಮೇಶ ರಾಯರಿಗದು ತಿಳಿಯದಿರಲಿಲ್ಲ. ತಿಳಿದೂ ಅವರು ಸುಮ್ಮನಿರುತ್ತಿದ್ದರು. ಅಲ್ಲದೆ ಅನಸೆದುರು ಯಾವಾಗಲೂ ಪ್ರೀತಿಪೂರ್ವಕವಾಗಿಯೇ ವರ್ತಿಸುತ್ತಿದ್ದರು. ಎಷ್ಟೆಂದರೂ ತನ್ನ ಸ್ವಂತ ಮಕ್ಕಳಿರುವಲ್ಲಿ ಪ್ರೀತಿಗೆ ಪಕ್ಷಪಾತವಿರುವುದೂ ಸ್ವಾಭಾವಿಕವಾಗಿದ್ದೇ. ಸಾಲದುದಕ್ಕೆ ಪತ್ನಿಯ ಅಲ್ಲಸಲ್ಲದ ದೂರುಗಳು ಅವರ ಪ್ರೀತಿಯನ್ನು ದಿನಕಳೆದಂತೆ ದೂರದೂರ ಓಡಿಸುತ್ತಿತ್ತು. ಹಾಗೂ ಅವರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿದ್ದುದರಿಂದಲೋ, ಪೂರ್ವಪುಣ್ಯದಿಂದಲೋ ಸುಂದರೂನ ಶಿಕ್ಷಣ ಕಾಲೇಜಿನ ವರೆಗೆ ಮುಂದುವರಿಯಿತು. ಜತೆಗೆ ವಿದ್ಯಾರ್ಥಿ ವೇತನವನ್ನು ದೊರಕಿಸಿಕೊಂಡು ಸುಂದರ ಹೇಗೂ ಬಿ. ಎ. ವರೆಗೆ ಓದಿದ. ಮುಂದೆ ಅದೃಷ್ಟ ಸುಂದರನ ಸ್ಥಿತಿಯನ್ನು ಸುಧಾರಿಸಿಕೊಂಡು ಹೋಯಿತು. ಮುಂಬಯಿಗೆ ಬಂದವನೇ ಒಳ್ಳೆಯ ಕೆಲಸವನ್ನೂ ಸಂಪಾದಿಸಿಕೊಂಡಿದ್ದನು.

ಈ ಮದುವೆಯ ಪ್ರಸ್ತಾಪ ಬಂದಿದ್ದು ಸುಂದರನ ಅತ್ತೆ ಕಮಲಮ್ಮನವ ರಿಂದ. ಹಿಂದೆಯೆಂದೂ ಅವನೊಡನೆ ಅಷ್ಟು ಸಲಿಗೆಯಿಂದ ಮಾತನಾಡದಿದ್ದ ಕಮಲಮ್ಮನವರು ಈ ಬಾರಿ ಸುಂದರ ರಜೆಯಲ್ಲಿ ಊರಿಗೆ ಬಂದಾಗ ಬಹಳ ಉತ್ಸಾಹದಿಂದ ಅವನನ್ನು ಕರೆಸಿಕೊಂಡರು. ಸಿಹಿಸಿಹಿ ತಿಂಡಿ ತಿನಸುಗಳನ್ನು ಮಾಡಿ ತಿನಿಸಿದರು. ಪಾಯಸದ ಊಟ ಬಡಿಸಿದರು. ಸುಂದರನಿಗೆ ಇದು ಅತ್ಯಂತ ಆಶ್ಚರ್ಯಕರವಾಗಿ ಕಂಡುಬಂದರೂ ತನ್ನ ಸ್ವಭಾವಕ್ಕೆ ತಕ್ಕಂತೆ ಅತ್ತೆ ಯನ್ನು ಅದಕ್ಕಾಗಿ ನಿಂದಿಸಲಿಲ್ಲ. ಇನ್ನೂ ಹೆಚ್ಚಾಗಿ ಗೌರವಿಸತೊಡಗಿದನು. ರಾಯರೂ ಬಹಳ ಪ್ರೇಮದಿಂದಲೇ ಸುಂದರನ ಕ್ಷೇಮಸಮಾಚಾರವನ್ನು ವಿಚಾರಿಸತೊಡಗಿದ್ದರು. ಹಾಗೆ ಹೀಗೆ ಮಾತಿಗೆ ಮಾತು ಬಂದು ಕಮಲಮ್ಮ ನವರು ಶೋಭಳ ವಿವಾಹದ ಪ್ರಸ್ತಾಪವೆತ್ತಿದರು. ಶೋಭಾ ಕಮಲಮ್ಮನವರ

ಸನಿಯದ ಸಂಬಂಧಿ. ಆದೇ ಯಾರೂ ಒಪ್ಪಲಾರದ ಈ ನೆಂಟಸ್ಥಿಕೆಯನ್ನು ಸುಂದರನ ಮೇಲೆ ಹೊರಿಸುವ ಪ್ರಯತ್ನ ನಡೆಸಿದರು. ರಾಯರೂ ಹೆಂಡತಿಯ ಮಾತನ್ನೇ ಎತ್ತಿ ಹಿಡಿದು ಸುಂದರನು ಮದುವೆಗೊಪ್ಪುವಂತೆ ಮಾತನಾಡ ಲಾರಂಭಿಸಿದರು. ಹೆಣ್ಣಿನ ಕಡೆಯವರು ಹತ್ತುಸಾವಿರ ರೂಪಾಯಿಗಳ ವರ ಮಾನ್ಯ ಕೊಡುವರಾಗಿ ಹೇಳಿದ್ದುದು ರಾಯರ ಆಸಕ್ತಿಯನ್ನು ಹೆಚ್ಚಿಸಿತ್ತು. ಸುಂದರನ ಶಿಕ್ಷಣಕ್ಕೆ ತಾನು ಮಾಡಿದ ಖರ್ಚು, ಪಟ್ಟ ಕಷ್ಟಗಳನ್ನೆಲ್ಲಾ ನೆನೆದು ಸೋಮೇಶರಾಯರು, ಇದರಿಂದ ತನಗೂ ಸುಂದರನಿಗೂ ಪ್ರಯೋಜನವಿರುವು ದೆಂಬ ದೃಷ್ಟಿಯಲ್ಲಿ ವಾದಿಸಿದ್ದರು. ಕಮಲಮ್ಮನವರು ನಿರ್ಭಾಗ್ಯ ಹೆಣ್ಣೊಂದನ್ನು ಉದ್ಧಾರಮಾಡಿದ ಪುಣ್ಯದಿಂದ ಸುಂದರನಿಗೆ ಮುಂದೆ ಒಳ್ಳೆಯದಾಗುವುದೆಂದು ಹೇಳಿ, ಸುಂದರನ ತಲೆಯಲ್ಲಿ ತಮ್ಮ ಬೌದ್ಧಿಕ ವಿಚಾರಗಳನ್ನೂ ತುಂಬಿದ್ದರು. ಇವರಿಬ್ಬರ ಸ್ವಾರ್ಥಬೋಧನೆ ಸುಂದರನ ಮನಸ್ಸಿನ ಮೇಲೆ ಬಹಳ ಪರಿಣಾಮ ವನ್ನುಂಟುಮಾಡಿದ್ದರೂ, ಸಹನಾಶೀಲನಾದ ಅವನು ಆಗಲೇ ಏನೂ ಖಂಡಿತ ಹೇಳಲಿಲ್ಲ.

ಅನಂತರ ಆ ಬಗ್ಗೆ ತನ್ನದೇ ಆದೊಂದು ದೃಷ್ಟಿಯಲ್ಲಿ ಎರಡು ಮೂರು ದಿನಗಳ ಯೋಚನೆಮಾಡಿದ ಸುಂದರು. ಸೋದರಮಾವನ ಮೇಲೆ ತನಗಿದ್ದ ಗೌರವ, ಅವರಿಂದ ಉತ್ತಮಗೊಂಡ ತನ್ನ ಸ್ಥಿತಿಗತಿಗಳು – ಇವೆಲ್ಲ ನೆನಸಿ ಕೊಂಡು ತಾನು ಅವರಿಗೆ ಪ್ರತಿಯಾಗಿ ಆಡಬಾರದು, ಅವರ ಮಾತಿಗೆದುರಾಡ ಬಾರದೆಂಬ ಆದರ ಭಾವನೆ ಅವನಲ್ಲಿ ಹುಟ್ಟಿತು. ಹಿಂದೆ ತಾನೊಮ್ಮೆ ಹೀಗ್ಗೆ ನಿರ್ಧರಿಸಿದ್ದ. ಅದೇನೆಂದರೆ "ತನ್ನ ಏಳಿಗೆಗೆ ಕಾರಣ ಮಾವನಾದದ್ದರಿಂದ ತಾನೆಂದೂ ಅವರಿಗೆದುರು ಬರಲಾರೆ" ಎಂದು! ಅದರ ಸತ್ವಪರೀಕ್ಷೆ ಈಗ ಆಗ ಬೇಕಿತ್ತು; ಅದಕ್ಕಾಗಿ ಅವನು ಸುಮ್ಮನೆ ಸಮ್ಮತಿಯಿತ್ತ; ಎದುರಾಡಲಿಲ್ಲ.

ಅಲ್ಲದೆ ಮತ್ತೊಂದು ಕಾರಣವೂ ಅವನ ನಿರ್ಧಾರಕ್ಕೆ ಬಲಕೊಟ್ಟಿತ್ತು. ವಿದ್ಯಾರ್ಥಿಯಾಗಿದ್ದಾಗ ಆತ ಗುರು ರವೀಂದ್ರರ ಕತೆಯೊಂದನ್ನು ಓದಿದ್ದ. ಅದು ಓರ್ವ ಮೂಕಕನ್ಯೆಯ ವಿವಾಹದ ಕುರಿತಾಗಿತ್ತು. ಅದು ಅವನ ಮನಸ್ಸಿಗೆ ಬಹಳ ನಾಟಿತ್ತು! ದಯಾರ್ದ್ರ ಹೃದಯ ಅವನದು; ಅದಕ್ಕೆ ಪುಟಗೊಟ್ಟಿತ್ತು. ಅವನ ಕಟು ಅನುಭವ-ಬಾಲ್ಯ ಜೀವನದು! ಅವನಾಲೋಚಿಸಿದ್ದ–ತಾನೊಬ್ಬ ಅನಾಥ; ತಂದೆತಾಯಿಯಿಲ್ಲ. ಆದ್ದರಿಂದ ನಿರ್ಭಾಗ್ಯವಂತ. ಆದರೆ ಅವಳು? ಎಲ್ಲ ಇದ್ದೂ ಮಾತಿಲ್ಲ, ಮೂಕಿ! ಅದೇ ಅವಳ ಪಾಲಿನ ದೌರ್ಭಾಗ್ಯ.

ನವರಾಜ ಈ ತರದ ಅಸಹಾಯಕತೆಯನ್ನು ಗಣಿಸುವುದಿಲ್ಲ. ಆದು ಕುರುಡು, ಕಣ್ಣಿಲ್ಲ. ಆದ್ದರಿಂದ ಅಂಧನಳನ್ನು ತಾನು ವಿವಾಹವಾದರೆ ತನ್ನ ಜನ್ಮ, ಕಲಿತ ವಿದ್ಯೆ ಸಾರ್ಥಕವಾದೀತು ಎಂದುಕೊಂಡನವನು. ಅನೇ ಬಲವತ್ತರವಾಗಿ ಅವನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿತು; ಒಪ್ಪಿದ. ರಾಯರಿಗೆ ಅದರಿಂದ ಆಶ್ಚರ್ಯವಾಗದಿರಲಿಲ್ಲ. ಎಲ್ಲಿ ತನಗೆರಡು ಹೇಳುವನೋ ಎಂದು ಹೆದರಿದ್ದರು. ಆತ ಸಮ್ಮತಿಯಿತ್ತೊಡನೆ ಇದು ತನ್ನ ಉಪಕಾರಕ್ಕೆ ಕೃತಜ್ಞತೆಯ ಪ್ರತ್ಯುಪಕಾರವೆಂದರಿತುಕೊಂಡರು. ಪಾಪ, ಸುಂದರನ ಮನೋಭಾವನೆ ಅವರಿಗೆ ಹೇಗೆ ಅರಿವಾದೀತು?

ಅನೇ ತಿಂಗಳಲ್ಲಿ ಮದುವೆ ವಯ್ಯಾರದಲ್ಲೇ ಮೆರೆಯಿತು. ಹೆಣ್ಣಿನ ಕಡೆಯವರು ತಮ್ಮ ಸ್ಥಿತಿಗತಿಗಳಿಗನುಸಾರವಾಗಿ, ಅಷ್ಟೇನೂ ಶ್ರೀಮಂತರಲ್ಲ ದಿದ್ದರೂ, ಇದ್ದೊಬ್ಬ ಮಗಳ ಮದುವೆಯೆಂದು ತಮ್ಮ ಆಸ್ತಿ ಪಾಸ್ತಿಗಳನ್ನು ಮಾರಿದಾದರೂ, ಮದುವೆ ವಿಜೃಂಭಣೆಯಿಂದ ಜರಗಿಸಿದರು. ಎಲ್ಲದ್ದಕ್ಕೂ ಶೋಭಾ ಮೂಕಿಯಾಗಿದ್ದೆ ಮೂಲಕಾರಣವಾಗಿತ್ತು!

ಶೋಭಾಳ ಗೆಳತಿಯರು ಬಹಳ ಚಕ್ಕಂದದಿಂದ ಮದುವೆಕಾರ್ಯಕ್ಕೆ ನೆರವಾಗಿದ್ದರು. ಶೋಭಾಳ ಕೈ ಹಿಡಿಯುವವ ಸುಶಿಕ್ಷಿತ ಯುವಕನೆಂದು ಅವರೆಲ್ಲ ಸಂತಸಗೊಂಡಿದ್ದರು. ದೇವರು ಅವಳ ಕೈ ಬಿಡಲಿಲ್ಲವೆಂದು ದೇವ ರನ್ನು ನೆನೆಯದಿರಲಿಲ್ಲ.

ಸುಂದರನಿಗೆ ಮಾತ್ರ ಎಲ್ಲೆಡೆಯಿಂದ ಹಾಸ್ಯ-ಅಪಹಾಸ್ಯದ ಅಣಕವಾಡು ಗಳೇ ಕೇಳಿ ಬರುತ್ತಿದ್ದವು. ಅವನ ಗೆಳೆಯರೇ ಅನೇಕರು ತಿಳಿದೂ ತಿಳಿದೂ ಅವನ ಮನ ನೋಯಿಸುತ್ತಿದ್ದರು. 'ಹೇಡಿ'ಯೆಂದರು ಕೆಲವರು. 'ತೀರಾ ಹೆಣ್ಣು' ಅಂದರು ಕೆಲವರು. 'ನಿನ್ನ ಮಾವ ನಿನ್ನಿಂದ ಹಣ ಹೊಡೆದ' ಎಂದು ಇನ್ನೂ ಕೆಲವರು ಹೇಳಲು ಹಿಂಜರಿಯಲಿಲ್ಲ. ಯಾವುದಕ್ಕೂ ಸುಂದರ ನಗೆ ಮೊಗದಿಂದಲೇ ಉತ್ತರ ಕೊಡುತ್ತಿದ್ದ. ಅವನಿಗನಿಸಿತ್ತು—'ಸುಖ ದುಃಖ ನನ್ನ ದಾಗಿರುವಾಗ ಇವರಿಗೇತರ ಚಿಂತೆ'—ಎಂದು!

ಜಗತ್ತು ವಿಶಾಲವಾದುದು. ಅದೇ ಜನರೂ ವಿವಿಧ ಮನೋವೃತ್ತಿ ಗಳಿರುವವರಲ್ಲವೆ?

## ೩

ಮದುವೆಯ ಮೊದಲ ದಿನ ರಾತ್ರಿ ಸುಂದರ ತನ್ನ ಶಯ್ಯಾಗೃಹದಲ್ಲಿ ವಿಚಾರಪರನಾಗಿ ಕುಳಿತಿದ್ದ. ಬಹುಶಃ ಮುಂದಿನ ಜೀವನದ ಸುಖದ ವಿಚಾರ ಕಲ್ಪನೆಯಿರಬೇಕು. ಆದರೊಮ್ಮೊಮ್ಮೆ ನಾಲ್ಕು ಜನರ ನಕ್ಕು ನುಡಿದ ಮಾತುಗಳು ಅವನನ್ನು ನೋಯಿಸುತ್ತಿದ್ದವು. ಈ ನೋವು–ಗೆಲವುಗಳ ತಿಕ್ಕಾಟದಲ್ಲಿ ಆತ ಒಬ್ಬನೆ ಕುಳಿತಿದ್ದ.

ಅದಾಗ ಬಾಗಿಲೆಳೆದು ಒಳಗೆ ಬಂದಳು ಶೋಭಾ; ಹೊರಗಿನಿಂದ ಹೆಂಗಳೆಯರು ಬಾಗಿಲು ಹಾಕಿ ಕಿಲ ಕಿಲ ನಕ್ಕರು. ಬಾಗಿಲದನಿ ಕೇಳಿದೊಡನೆ ಸುಂದರನ ಸಮಾಧಿಭಂಗವಾಯಿತು. ನೋಡುತ್ತಾನೆ–ಶೋಭಾ! ತನ್ನ ಬಾಳ ಗೆಳತಿ! ಕೈ ಹಿಡಿದ ಮಡದಿ!

ಕಿಲ ಕಿಲ ನಗು ಇನ್ನೂ ಕುಲುಕುಲಿಸುತ್ತಿತ್ತು. ಅದು ಸುಂದರನ ಕಿವಿಗೆ ಕರ್ಕಶವಾಗಿ ಕೇಳಿತು. ಅದರಿಂದ ಮನಸ್ಸಿಗೂ ಅಸಮಾಧಾನವಾಯಿತು.

“ಇತ್ತ ಬಾ ಶೋಭಾ, ಅಲ್ಲೇಕೆ ನಿಂತಿರುವೆ?” ಎಂದು ಕರೆದ. ಅದು ಅವನ ಹೃದಯದಿಂದ ಬಂದ ಮಾತುಗಳು. ಅವಳು ಹೇಗೆ ಕೇಳಿಯಾಳು? ಆಕೆ ಸುಮ್ಮನೆ ಪಿಳಿ ಪಿಳಿ ಕಣ್ಣುಬಿಟ್ಟು ನಿಂತಳು. ನಾಚಿಕೆ ಬೇರೆ ತಲೆತಗ್ಗಿಸಿತು.

ಸುಂದರನಿಗೆ ಇದರ ಅರ್ಥವಾಯಿತು. ತನ್ನ ತಪ್ಪನ್ನರಿತುಕೊಂಡನು. ಮಾತು ಬಾರದವಳೊಡನೆ ಮಾತಾಡಿ ಪ್ರಯೋಜನವೇನು? ಕೂಡಲೇ ಅವನೆದ್ದು ಶೋಭಾಳ ಕೈಹಿಡಿದೆಳೆದು ತನ್ನ ಪಕ್ಕದಲ್ಲಿ ಕುಳ್ಳಿರಿಸಿದ. ಅವಳು ಮಾತನಾಡದಿದ್ದದ್ದು ತುಸು ಅಸಮಾಧಾನವಾಗಿರಬೇಕು. ತಾನೂ ಮೌನಿಯಾದ. ಆ ಒಂದು ಕ್ಷಣದಲ್ಲಿ ಓರ್ವ ಗಯ್ಯಾಳಿ ನುಡಿದ ಮಾತುಗಳು ಅವನಿಗೆ ನೆನಪಾಗಿ ಎದೆಗೆ ಮೊಳೆ ಹೊಡೆದಂತಾಯಿತು—

“ಬಾಯಿ ಇಲ್ಲದ ಹೆಣ್ಣಿನೊಡನೆ ಏನು ಬೊಗಳುವಿ? ಮಾತಿನ ಸುಖ ಕಾಣದವ ಮೈಯ್ಯ ಸುಖ ಪಡದೇನು ಫಲ? ಕಿವಿಯಾರೆ ಕೇಳಬೇಕು ಇನಿಯಳ ಇಂಚರ ಧನಿಯ ....?”

ಆ ಸುಖ ಮಾತ್ರ ತನಗಿಲ್ಲವೆಂದು ಆ ಕ್ಷಣಕ್ಕೆ ಬಹಳ ನೊಂದುಕೊಂಡ. ಹೀಗೆ ಸುಂದರು ವಿಚಾರಮಾಡುತ್ತಿರುವಾಗ, ಅತ್ತ ಶೋಭಾ ‘ಗಳ ಗಳ’ ಅಳಹತ್ತಿದಳು.

ಸುಂದರ ನೋಡಿದ —ಸೌಜನ್ಯ ಸುಂದರಿಯನ್ನು!

'ನಿನ್ನದೇನು ತಪ್ಪು ಅದರಲ್ಲಿ?' ಎನ್ನುವಂತೆ ಅವನು ಅವಳನ್ನು ಸಂತೈಸಿದ ಕೈಸನ್ನೆಯಿಂದ. ಆ ಭಾಷೆ ಅವನಿಗೆ ಹೊಸದು. ಇದೇ ಈಗ ಅದರ ಮೊದಲ ಪಾಠ ಕಲಿತುಕೊಂಡ. ಇಬ್ಬರೂ ಒಬ್ಬರನ್ನೊಬ್ಬರು ಮುಖ ಮುಖ ನೋಡಿ ಕೊಂಡರು. ಆ ಮೌನ ನೋಟದಿಂದಲೇ ಮೂಕಮಾತನಾಡಿಕೊಂಡರು. ಅದೇ ಅವರಂದು ಅನುಭವಿಸಿದ ಸುಖಸಮ್ಮಿಲನ!

ಮರುದಿನ ತಮ್ಮಿಬ್ಬರ ತಲೆದಿಂಬುಗಳೂ ಒದ್ದೆಯಾಗಿರುವುದನ್ನು ಕಂಡು ಸುಂದರನಿಗೆ ಆಶ್ಚರ್ಯವಾಗಲಿಲ್ಲ. ತಾನೊಂದು ತತ್ವ ತಿಳಿದಿರುವನಾಗಿ ಆತ ಹರುಷಗೊಂಡಿದ್ದ. ಅದವನ ಬಾಯಿಯಿಂದ ಕಾವ್ಯರೂಪವಾಗಿ ಹೊರ ಹೊಮ್ಮಿತು:

ಹಕ್ಕಿಗಳು ಹಾರುತಿವೆ,
ಅಕ್ಕರೆಯುಲಪ್ಪುತಿವೆ,
ಮಾತಿಲ್ಲ; ಮೌನ!
ಚಿಕ್ಕ ಹಕ್ಕಿ ಹೃದಯದೊಳಗು,
ಚಿಕ್ಕದಾದ ಹೃದಯವಿಹುದು,
ಏಕಿರದು ಪ್ರೇಮ?

೪

ಸುಂದರ-ಶೋಭಾಳ ಜೀವನವೂ ಅಂತೆಯೇ ಒಂದು ಹಕ್ಕಿಯ ಚಿಕ್ಕ ಸಂಸಾರವಾಯಿತು. ಮುಂಬಯಿಗೆ ಬಂದ ಕೆಲಕಾಲ ಶೋಭಾಗೆ ಅಲ್ಲಿಯ ನೂತನ ವಾತಾವರಣ ಹಿತವಾಗಲಿಲ್ಲ. ಹತ್ತಿಪ್ಪತ್ತು ನಾಲುಮನೆಗಳ ಕಟ್ಟಡ ದಲ್ಲಿ ತನ್ನದೂ ಒಂದು ಚಿಕ್ಕ ಕೊಠಡಿ. ಅದರೊಳಗೇನೆ ತನ್ನ ಸಂಸಾರ ಸಾಗ ಬೇಕು. ನೆರೆಮನೆಯವರು ತೀರಾ ಅಪರಿಚಿತರು. ತಾನಾಗಿ ಪರಿಚಯ ಮಾಡಿಸಿ ಕೊಳ್ಳುವ ಹಾಗಿಲ್ಲ, ಅವರಾಗಿ ಬಂದು ಮಾತನಾಡಿಸುವಂತಿಲ್ಲ. ಅಂತೂ ತನ್ನವರೆಂಬವರು ಅವನೊಬ್ಬನೇ–ತನ್ನ ಕೈಹಿಡಿದ ದಾತ–ಸುಂದರ! ಅವನನ್ನುಳಿ ದರೆ, ತನ್ನಲ್ಲಿ ಸಹಾನುಭೂತಿ ತೋರಿ ಸಹಕಾರ ನೀಡುವವರು ಅಲ್ಲಿ ಯಾರೂ ಕಂಡುಬರಲಿಲ್ಲ. ಅದೇ ಸುಂದರ ಹೊರಹೊರಟಾಗ ಅವಳ ಮನಸ್ಸು ಬಹಳ ಕಸವಿಸಿಗೊಳ್ಳುತಿತ್ತು.

ಬೆಳಿಗ್ಗೆ ಹತ್ತು ಘಂಟೆಗೆ ಹೊರಟುಹೋದವ ಮತ್ತೆ ಸಂಜೆ ಕತ್ತಲಾದ ಮೇಲೆಯೇ ಮನೆಗೆ ಬರುತ್ತಿದ್ದ ಸುಂದರ. ಆಯಾಸದಿಂದ ಮರಳಿ ಬಂದವನಿಗೆ ಶೋಭಾಳ ನಿರ್ಮಲ ಮುಖದರ್ಶನವೇ ಉಪಹಾರವಾಗುತಿತ್ತು. ಅಷ್ಟರಲ್ಲೇ ಅವನು ತೃಪ್ತಿಹೊಂದಬೇಕಿತ್ತು. ಸರಸ ಸಲ್ಲಾಪವಿಲ್ಲ. ಇಂಚರ ದನಿಯಿಂಪು ಇಲ್ಲ! ಎಷ್ಟೆಂದರೂ ಮನುಷ್ಯ ಸ್ವಭಾವ. ಇತರರಂತೆ ತಾನೇಕೆ ಆಗಬಾರದೆಂಬ ಆಸೆ ಒಮ್ಮೊಮ್ಮೆ ಅಂಕುರಿಸುವುದು. ಆದರೆ ಪುನಃ ನಿರಾಶೆ. ತಾನು ಅವಸರ ಮಾಡಿದೆನೆಂದೊಮ್ಮೆ ಪರಿತಪಿಸಿದರೆ, ತಾನೊಂದು ಶ್ರೇಷ್ಠ ಕಾರ್ಯವೆಸಗಿದೆ ನೆಂದು ಸಂತಸಗೊಳ್ಳುವನು. ಹೀಗೆ ಮನಸ್ಸಿನಲ್ಲಿ ವಿಚಾರಗಳ ಏರಿಳಿತ! ಬಾಯಿಗೋ ಮೌನ ಮುದ್ರೆಯೊತ್ತಿತ್ತು! ಈ ತೆರನ ಪತಿಯ ಮನೋವ್ಯಸನ ಆ ಶೋಭಳಿಗೆ ಅರ್ಥವಾಗದ್ದಿರಲಿಲ್ಲ. ಅದರಿಂದ ಅವಳು ಮರೆಯಲ್ಲಿ ಕಂಬನಿ ಗರೆಯುತ್ತಿದ್ದಳು. ಹೆಚ್ಚಿಗೇನುಮಾಡಬಲ್ಲಳು?

ಒಂದು ದಿನ ಸ್ವಲ್ಪ ಬೇಗನೇ ಸುಂದರ ಮನೆಗೆ ಹಿಂತಿರುಗಿದ. ಅವನ ದೇಹಸ್ಥಿತಿ ಚೆನ್ನಾಗಿರಲಿಲ್ಲವೇನೋ, ಅಂತೂ ಮನಸ್ಸೂ ನೆಮ್ಮದಿಯಿದ್ದಿರಲಿಲ್ಲ. ತನ್ನ ಕೊಟಡಿಯ ಬಾಗಿಲು ಬಡಿಯುವುದನ್ನು ಕೇಳಿ ಶೋಭಳಿಗೆ ಆಶ್ಚರ್ಯ ವಾಯಿತು. ಸುಂದರ ಬರಲು ಇನ್ನೂ ಹೊತ್ತಿದೆಯೆಂದು ಆಕೆ ಬಲ್ಲಳು. ಆದುದರಿಂದ ತುಸು ಸಂಕೋಚದಿಂದಲೇ ಬಾಗಿಲು ತೆರೆದಳು. ನೋಡುತ್ತಾಳೆ–ಪತಿದೇವ!

ಸುಂದರ ನಗೆಮೊಗದಿಂದಲೇ ಒಳಗೆ ಬಂದು ಆಸನವೊಂದರ ಮೇಲೆ ಕುಳಿತುಕೊಂಡನು. ಅಷ್ಟರಲ್ಲಿ ಮೇಜಿನ ಮೇಲೆ ಬಿದ್ದಿರುವ ಚಿತ್ರವೊಂದು ಅವನ ಕಣ್ಣು ಸೆಳೆಯಿತು. ಆಶ್ಚರ್ಯವಾಯಿತಾಗ! ಆ ಚಿತ್ರ ಶೋಭಾ ಅದೇ ತಾನೆ ಬರೆಯುತ್ತಲಿದ್ದಳು. ಶೋಭಾ ಕುಶಲ ಕಲಾವಿದೆಯೆಂದು ಇದೀಗ ಅವನಿಗೆ ತಿಳಿಯುವಂತಾಯಿತು. ಮೂಕಿಯಾದವಳಿಗೆ ಚಿತ್ರಗಾರಿಕೆಯೊಂದು ಭೂಷಣ ಕಲೆಯೆಂಬುದಕ್ಕೆ ತನ್ನ ಶೋಭಾ ಆದರ್ಶ ವ್ಯಕ್ತಿಯಾದಳೆಂದು ಹಿಗ್ಗಿದ. ಅವಳ ಕಲೆಗಾರಿಕೆಗೆ ಮೆಚ್ಚಿದ. ಅವಳ ಜಾಣ್ಮೆಗೆ ಮೆಚ್ಚಿ ತಲೆ ದೂಗಿದ.

ಮತ್ತೆ ಚಿತ್ರವನ್ನು ದಿಟ್ಟಿಸಿ ನೋಡಲಾರಂಭಿಸಿದನು. ಅದು ಓರ್ವ ನರ್ತಕಿಯ ನಾಟ್ಯಭಂಗಿಯನ್ನು ಚಿತ್ರಿಸಿತ್ತು. ಆ ನಾಟ್ಯವನ್ನು ನೋಡುತ್ತ ಮೈಮರೆತ ರಸಿಕನೊಬ್ಬ ಮುಂದೆ ಕುಳಿತಿದ್ದಾನೆ. ಇದಿಷ್ಟು ಚಿತ್ರ ಹೇಳುತಿತ್ತು.

ಆದರೆ ಅದರಡಿಯಲ್ಲಿ ಶೋಭಾ ಏನೋ ಬರೆದಿದ್ದಳು. ಅದು ಚಿತ್ರವನ್ನು ಕುರಿತಾಗಿತ್ತು. ಸುಂದರ ಓದಿದ –

"ಮೂಕನೃತ್ಯಕ್ಕೆ ಮನಸೋತು ನರ್ತಕಿಯನ್ನು ಮೋಹಿಸುವ ಈ ವಿಲಾಸಿ, ನಿಜವಾಗಿ ಅವಳೊರ್ವ ಮೂಕಿ ಹೆಣ್ಣಾಗಿದ್ದರೆ ಪ್ರೀತಿಸಿಯಾನೆ?.. .. ಯಾಕೆ, ಇಲ್ಲ?"

ಆ ಪ್ರಶ್ನೆ ತನ್ನನ್ನೇ ಉದ್ದೇಶಿಸಿ ಹೇಳಿದುದಾಗಿತ್ತೆಂದು ಸುಂದರನಿಗೆ ಅರ್ಥವಾಗಲು ಹೆಚ್ಚು ವೇಳೆ ಹಿಡಿಯಲಿಲ್ಲ. ಇದು ತನ್ನ ಮತ್ತು ಶೋಭಾಳ ಜೀವನ ಚಿತ್ರವೆಂದು ಭಾವಿಸಿದ. ಇಂತಹ ಕುಶಲ ಕಲಾವಿದೆ, ಜಾಣ್ಮೆಯ ಸುಂದರಿಯ ಕೈಹಿಡಿವ ತಾನೇ ಧನ್ಯನೆಂದು ತಿಳಿದುಕೊಂಡ. ಅಂತರಂಗದ ಭಾವಾವೇಶ ಈ ರೀತಿ ಸಂತಸಗೊಂಡಾಗ ಅವನ ಕೈಗಳು ಅವಳನ್ನಪ್ಪಿ ಹಿಡಿದವು. ಪ್ರಶ್ನೆಗೆ ಉತ್ತರವೋ ಎನ್ನುವಂತೆ ಅವಳನ್ನೊಮ್ಮೆ ಚುಂಬಿಸಿದ. ಶೋಭೆಯ ಕಂಗಳು ಅಷ್ಟರಲ್ಲೇ ಹನಿದುಂಬಿದ್ದವು.

ಆದರೆ ಅದು ದುಃಖದ ಕಣ್ಣೀರಲ್ಲ; ಆನಂದದ ಪನ್ನೀರು!



# ಚಕ್ರಗತಿ

ನಿ. ವ್ಯಾ. ಬಲ್ಲಾಳ.

ದಿಗಂತವೇ ಗುರಿಯೆಂಬಂತೆ ಸದ್ದು ಮಾಡುತ್ತಾ ಸಾಗಿದ್ದ 'ತಾತಾ' ವಿಮಾನವ ಹಾರಾಟವನ್ನು ನೋಡುತ್ತಾ ಸುಭದ್ರೆ ಮೈಮರೆತು ನಿಂತಿದ್ದಳು.

ಬಾಲ್ಕನಿಯ ದಂಡೆಗೆ ಎದೆಯಾನಿಸಿ ನಿಂತಿದ್ದ ಆಕೆಗೆ, ವಿಮಾನದ ಹಾರಾಟವನ್ನು ಆತ್ಮೀಯದೃಷ್ಟಿಯಿಂದ ಗಮನಿಸುತ್ತಿದ್ದಾಗ, ಸುತ್ತಲಿನ ಪರವೆಯಿರಲಿಲ್ಲ. ಸೀಳಾಗಿ ಹೆಣೆದಿದ್ದ ಜಡೆಯ ಒಂದು ಭಾಗ ಆಕೆಯ ಕುತ್ತಿಗೆಯಿಂದ ಹಾದು ಬಾಲ್ಕನಿಯ ದಂಡೆಯ ಹೊರಬದಿಯಲ್ಲಿ ಗಾಳಿಬಂದಂತೆ ತೇಲುತ್ತಿತ್ತು. ದಂಡೆಯ ಮೇಲ್ಕಟ್ಟಿನ ಮೇಲೆ ತಲೆಯಿಟ್ಟುದರಿಂದ ಕೊಂಕಿದ ಕೊರಳಿನ ಹಿಂದೆ ಜಡೆಯ ಇನ್ನೊಂದು ಸೀಳು ಜೋತಾಡುತ್ತಿತ್ತು.

ಆಕಾಶದ ಆಪ್ತನೊಡನೆ ಸುಭದ್ರ ಮೂಕ ಸಂಭಾಷಣೆ ನಡೆಸಿದ್ದಳು.

'ಅವರೂ ಇದೇ ರೀತಿ ಗಾಳಿಯಲ್ಲಿ ಹಾರಾಡುತ್ತಿರಬಹುದು ಈಗ. ಹಾಗೆ ಹಾರಾಡುವಾಗ ನನ್ನ ವಿಚಾರ ಯೋಚಿಸಬಹುದೆ? ಛೆ! ಯೋಚಿಸಿಯೇ ತೀರುತ್ತಾರೆ. ಆವರೂ ಮಿಲಿಟರಿ ಆಜ್ಞಾಪಾಲನೆಯ ಸಮಯ ಹೆಂಡತಿ ಮಕ್ಕಳನ್ನು ಯೋಚಿಸಲು ಸಮಯವಾದರೂ ಸಿಗಬಹುದೆ? ಅಲ್ಲಿ ಅವರು ಹಾರಾಡುತ್ತಿರುವುದು ತಮಾಷೆಗಾಗಿಯೆ? ೧೮೦೦೦, ೨೦,೦೦೦ ಅಡಿ ಎತ್ತರದಲ್ಲಿ, ಅದೂ ಹಿಮತುಂಬಿದ ಹಿಮಸತ್ಪರ್ವತದ ಸಾಲುಗಳ ನಡುವೆ ಹಾರಾಡುವಾಗ ನನ್ನ ಯೋಚನೆಯೇ! . . . . . '

ಇವಳ ಯೋಚನೆಗಳಿಗೆ, ಪ್ರಶ್ನೆಗಳಿಗೆ ಯಾವ ಉತ್ತರವನ್ನೂ ಕೊಡೆನೆಂಬಂತೆ ವಿಮಾನ ಸದ್ದು ಕಡಮೆ ಮಾಡುತ್ತಾ ದೂರ ಸಾಗಿತ್ತು.

'ನನ್ನ ಯೋಚನೆಯಿಲ್ಲದಿದ್ದರೂ ಚಿಂತಿಲ್ಲ. ಆದರೆ ಸುರೇಶನನ್ನು ಯೋಚಿಸದೆ ಇರುತ್ತಾರೆಯೇ? ಮಗುವನ್ನು ಕಾಣುವ ಲವಲವಿಕೆಗೆ, ಆತುರಕ್ಕೆ,

ಕಾಶ್ಮೀರ – ಹತ್ತು ಸಾವಿರ ಅಡಿ, ಇಪ್ಪತ್ತು ಸಾವಿರ ಅಡಿ, ಹಿಮವೆಂಬ ತಡೆಗಳಿವೆಯೆ? ಆ ಆತುರ ಅವರನ್ನು ಯೋಚಿಸದೆ ಇರುವಂತೆ ಬಿಡುತ್ತದೆಯೆ? . . '

ವಿಮಾನದ ಸದ್ದು ಅಸ್ಪಷ್ಟವಾಗುತ್ತಾ ಬರುತ್ತಿತ್ತು. ವಿಮಾನವೂ ಸಣ್ಣದಾದಂತೆ ಕಾಣುತ್ತಿತ್ತು. ಕೀರ ಚಿಕ್ಕ ಚಿಕ್ಕದು ಪ್ರಮಾಣವನ್ನು ತಾಳುವುದರಲ್ಲಿತ್ತು.

'ಸುರೇಶ ಹುಟ್ಟುವ ಮುಂಚೆಯೇ ಅವರು ಗಂಡು ಕೂಸು ಹುಟ್ಟುವುದೆಂದು ನಿಶ್ಚಯವಾಗಿ ಹೇಳಿದ್ದರಲ್ಲ. ಅವನು ೨೮ ವರ್ಷ ತುಂಬುವುದರೊಳಗೆ 'ಏರ್ ಮಾರ್ಶಲ್' ಆಗುವಂತೆ ತರಬೇತುಗೊಳಿಸಬೇಕು ಎನ್ನುತ್ತಿರುವವರು ಈಗ ಯೋಚಿಸದೆ ಇದ್ದಾರೆಯೆ? ಆಗ ನಾನು ಹೊಲಿಯುತ್ತಿದ್ದ ಉಲ್ಲನ್ ಕಾಲುಚೀಲಗಳು ಸಹಿತ ಮಗುವಿಗೆ ಚಿಕ್ಕದಾಗುವುವೆಂದು ಹೇಳಿದವರು ಅವರು. ಆದರೆ ಅವರು ಹೇಳಿದಂತೆಯೇ ಸುರೇಶ ಹುಟ್ಟಿ ಬರುವಾಗಲೇ ಅವು ಅವನಿಗೆ ಸಣ್ಣವಾಗಬೇಕೆ? ಎಷ್ಟಾದರೂ ತಂದೆಯನ್ನು ಸೋಲಿಸಲು ಹೊರಟ ತುಂಟನಲ್ಲವೆ!'

ಸುಭದ್ರೆಯ ಹೃದಯ ಅವ್ಯಕ್ತ ಆನಂದದಿಂದ ತುಂಬಿತ್ತು. ವಿಮಾನ ಚಿಕ್ಕೆಯಂತಾಗಿ ಮರೆಯಾದುದನ್ನು ಆಕೆ ಗಮನಿಸಲಿಲ್ಲ. ಎಡಕಾಲಿನ ಮೇಲೆ ಭಾರ ಹಾಕಿ ನಿಂತಿದ್ದಾಕೆ ಕಾಲು ಬದಲಿಸಿ, ದೀರ್ಘ ನಿಶ್ವಾಸವೊಂದನ್ನು ಬಿಟ್ಟು ವಿಮಾನ ಹೋದ ಕಡೆಗೇ ಮುಖ ಮಾಡಿ ದಿಗಂತವನ್ನು ದಿಟ್ಟಿಸುತ್ತಾ ಅದೇ ರೀತಿ ನಿಂತುಬಿಟ್ಟಳು.

'ಅವರನ್ನು ಕಂಡು ಹತ್ತು ತಿಂಗಳಾಯಿತು. ಮಗು ಹುಟ್ಟುವಾಗ ಬಳಿಯಲ್ಲೇ ಇರಬೇಕೆಂದು ಎಷ್ಟು ಆಸೆ ಇಟ್ಟುಕೊಂಡಿದ್ದರೋ ಏನೋ. ಆದರೆ ಹಾಳಾದ ಕಾಶ್ಮೀರ ಯುದ್ಧ ಸುರುವಾಗಿ ಅವರು ಹೋಗಲೇಬೇಕಾಗಿ ಬಂತಲ್ಲ!'

ಯುದ್ಧರಂಗವನ್ನು ನೆನಸಿದಾಗ ಸುಭದ್ರೆಯ ಹೃದಯದಲ್ಲಿ ಅಸ್ಪಷ್ಟವಾದೊಂದು ಭೀತಿಯ ಛಾಯೆ ಸುಳಿಯದಿರಲಿಲ್ಲ. ಕೊರಳು ತಗ್ಗಿಸಿ, ಬಾಲ್ಕನಿಯ ದಂಡೆಯಿಂದ ಎರಡು ಮಾಳಿಗೆಗಳ ಕೆಳಗೇನಿದೆಯೆಂದು ನೋಡಿದಳು. ಹಾಗೆಯೇ ಕಣ್ಣು ಮುಂದೆ ಹೊರಳಿದಾಗ ದೂರದಲ್ಲಿ ವಿದ್ಯುದ್ಬಂಡಿಯೊಂದು ಓಡುತ್ತಿರುವುದು ಕಂಡುಬಂತು. ಜೀವದ ಆಸೆಯೂ ಇಲ್ಲವೆಂಬಂತೆ ಅದರ ಬಾಗಿಲುಗಳಿಗೆ, ಕಿಟಕಿಗಳ ಕಂಬಿಗಳಿಗೆ ಜೋತು ಬಿದ್ದಿದ್ದ ಜನಸಮುದಾಯವನ್ನು ನೋಡಿ ಆಕೆಯ ಕಳವಳ ಇನ್ನಷ್ಟು ಹೆಚ್ಚಾಯಿತು.

'ಜೀವದ ಆಸೆ ಬಿಟ್ಟು ಯಾಕಪ್ಪಾ ಈ ಪ್ರಯಾಣ' ಎಂದು ಮನಸಿನಲ್ಲೇ ಯೋಚಿಸುತ್ತಿರುವಾಗ ಅವರ ನೆನಪು ಮತ್ತೆ ಬಂತು. 'ಜೀವದ ಆಸೆ ಬಿಟ್ಟೇ ಯುದ್ಧಕ್ಕೆ ಹೋಗಬೇಕು.' ಭೀತಿಯಿಂದ ಸುಭದ್ರೆಯ ಮನ ಬಾಡಿದಾಗ, ಬಾಲ್ಕನಿಯ ದಂಪೆಯ ಹೊರ ಭಾಗದಲ್ಲಿ ಜೋತಾಡುತ್ತಿದ್ದ ಜಡೆಯೊಂದಿಗೆ ಆಟ ಮಾಡುತ್ತಿದ್ದ ಬಲಗೈ, ತನ್ನ ಆಟ ನಿಲ್ಲಿಸಿ ಕೇಶಗುಚ್ಛವನ್ನು ಅದುಮಿ ಹಿಡಿಯಿತು. ಹಾಗೆ ಅದುಮಿ ಹಿಡಿದಿದ್ದ ಕೈ, ಯಂತ್ರದಂತೆ ಪುನಃ ನಡಲಿದಾಗ **ಜಿಗಿದ** ಆಕೆಯ ಜಡೆ ಆಕೆಯ ಹೃದಯದ ಕಳವಳವನ್ನು ನಿಲ್ಲಿಸಿರಬೇಕು.

'ದೇವರಿದ್ದಾನೆ ಹತ್ತು ತಿಂಗಳು ಕಳೆದಿಲ್ಲವೆ! ಅವೂ ವಿಮಾನಯುದ್ಧವೇನೂ ಇಲ್ಲ ಕಾಶ್ಮೀರದಲ್ಲಿ. ಭಾರತದ ವಿಮಾನಗಳು ಯುದ್ಧದಲ್ಲಿ ಸೈನ್ಯಕ್ಕೆ ಸಹಾಯ ಕೊಡಲು ಮಾತ್ರ ಹೋಗಿದ್ದಾವೆ. ಅದರಲ್ಲೂ ಇವರು ಫ್ಲೈಟ್ ಲೆಫ್ಟಿನೆಂಟ್ ಪದವಿಗೇರಿದವರು. ಏನೂ ಅಪಾಯವಿರಲಿಕ್ಕಿಲ್ಲ. ನಾಡಿದ್ದು ಹಬ್ಬಕ್ಕೆ ಖಂಡಿತ ಬರಲು ಪ್ರಯತ್ನಿಸುತ್ತೇನೆಂದು ಬರೆದಿದ್ದಾರಲ್ಲ! ಬಂದಾಗ ಕೇಳಿಯೇ ಕೇಳುತ್ತೇನೆ. . . .'

ಯೋಚನೆಯ ಗುಂಗಿನಲ್ಲಿ, ಕಣ್ಣುಗಳನ್ನು ಅರೆ ಮುಚ್ಚಿ ದಂಡೆಗೊರಗಿದ್ದ ಆಕೆಗೆ ಸಂಜೆಯ ಹೊಂಬಿಸಿಲು ತನ್ನ ಕಣ್ಣು ಮುಖಗಳ ಮೇಲೆ ಹಾದು ಕುರುಳಿನೊಂದಿಗೆ ಚಿನ್ನಾಟವಾಡುತ್ತಿದೆಯೆಂಬುದೂ ತಿಳಿದಿರಲಿಲ್ಲ. ಗಂಡನ ಬರವಿನ ಸ್ವಾಗತದ ಸ್ವಪ್ನ ಸಂಭ್ರಮದಲ್ಲಿ ಸುಭದ್ರೆ ಸಂಪೂರ್ಣ ನಿಮಗ್ನೆ.

'ಏನೇ ಸುಭಾ! ಎಷ್ಟು ಬಾರಿ ಕರೆಯಬೇಕೇ ನಿನ್ನ' ಎಂದು ಹತ್ತಿರದಲ್ಲೇ ಅತ್ತಿಗೆಯ ದನಿ ಎಚ್ಚರಿಸಿದಾಗ ಸುಭದ್ರೆ ಸ್ವಪ್ನ ರಾಜ್ಯದಿಂದ ಹೊರಬಂದಳು.

'ಕರೆದಿರಾ ಅತ್ತಿಗೆ?' ಎಂದಂದುಕೊಂಡು.

'ಸುರೇಶ ಅಳಲು ತೊಡಗಿ ಅರ್ಧ ಘಂಟೆಯಾಯಿತು. ಮೂರು ಸಲ ಕರೆದರೂ ನಿನಗೆ ಕೇಳಿಸಲಿಲ್ಲ. ಮಗುವಿಗೆ ಹಸಿವಾಗುತ್ತದೆಯೋ ಇಲ್ಲವೆಂತಾದರೂ ಯೋಚಿಸಬೇಡವೇ?'

ಸುಭದ್ರೆ ಲಗುಬಗೆಯಿಂದೆದ್ದು ಓಡಿದಳು. ಎರಡು ಕೋಣೆಗಳನ್ನೂ ಎರಡೇ ನಿಮಿಷಗಳಲ್ಲಿ ಹಾದು ತೊಟ್ಟಿಲ ಬಳಿ ಸೇರಿ ಅಳುತ್ತಿದ್ದ ಸುರೇಶನನ್ನೆತ್ತಿ ಮುದ್ದಿಟ್ಟು ಎದೆಗವುಚಿಕೊಂಡು ಬಳಿಯಲ್ಲಿದ್ದ ಸೋಫಾದ ಮೇಲೆ ಕುಳಿತಾಗಲೇ ಆಕೆ ಸರಿಯಾಗಿ ಉಸಿರು ಬಿಟ್ಟಿದ್ದು.

ಹಿಂದಿನಿಂದಲೇ ಬಂದಿದ್ದ ಪ್ರಭಾ, ತಾಯ್ತನದ ಸಲಿಗೆಯನ್ನು ಕಂಡು ಮೆಲುನಗೆ ನಗುತ್ತಿದ್ದಳು.

'ಅಳುವಾಗ ಯೋಚನೆಯೇ ಇಲ್ಲ. ಮತ್ತೆ ಯಾರಾದರೂ ಕರೆದು ಎಚ್ಚರಿಸಿದ ಮೇಲೆ ಮೈಮುರಿಯುವಂತೆ ಎಳೆಜೀವವೊಂದಿಗ ಮುದ್ದಾಟ.'

ಪ್ರಭಾಳ ಮಾತಿನಲ್ಲಿ ಹುಸಿಮುನಿಸಿನ ಹಾಸ್ಯ ತುಂಬಿ ತುಳುಕುತ್ತಿತ್ತು.

ಸುರೇಶನಿಗೆ ಮೊಲೆಯುಣಿಸಲು ಆರಂಭಿಸಿದ ಸುಭದ್ರೆಯ ಮೇಲೆ ಅತ್ತಿಗೆಯ ಹುಸಿ ಮುನಿಸು ಪರಿಣಾಮ ಮಾಡಲಿಲ್ಲ. ಬ್ಲೌಸ್ ಗುಂಡಿಗಳನ್ನು ಹಿಡಿದು ಆಟವಾಡುತ್ತಾ, ಊಟದ ಕೆಲಸ ನಡಸಿದ್ದ ಸುರೇಶನನ್ನು ನೋಡುತ್ತಾ ಆ ಪುಟ್ಟ ತಲೆಯ ಕೂದಲನ್ನು ನೇವರಿಸುತ್ತಾ ಕುಳಿತಿದ್ದ ಸುಭದ್ರೆಯ ಮೊಗದಲ್ಲಿ ತೃಪ್ತಿ ತಾಂಡವವಾಡುತ್ತಿತ್ತು.

'ನಿಜಕ್ಕೂ ಅರ್ಧ ಘಂಟೆಯಾಯಿತೆ ಅತ್ತಿಗೆ ಸುರೇಶ ಅಳತೊಡಗಿ!'

'ಇಲ್ಲವೆ ಸುಮ್ಮನೆ ತಮಾಷೆಗಾಗಿ ಹೇಳಿದೆ. ಎದ್ದು ಅಳತೊಡಗಿದ. ಹಸಿವಿನಿಂದಾಗಿಯೇ ಅಳುತ್ತಾನೆ ಎಂದು ಎರಡು ಸಲ ನಿನ್ನನ್ನು ಕರೆದೆ. ಆದರೆ ಯೋಚನೆಯಲ್ಲಿರುವಾಗ ನಿನ್ನನ್ನು ಕರೆದರೆ ನಿನಗೆ ಕೇಳಿಸುವುದೆ?'

ತಾಯಿಯ ಕುತ್ತಿಗೆಯಲ್ಲಿದ್ದ ಚಿನ್ನದ ಮಂಗಳಸೂತ್ರವನ್ನು ಸುರೇಶ ಜಗ್ಗಿ ಎಳೆಯುತ್ತಿದ್ದ. ಸುಭದ್ರೆ ನಗುತ್ತಿದ್ದಳು.

'ಹಬ್ಬಕ್ಕೆ ಬಂದಾರೇ ಅತ್ತಿಗೆ?'

ತೊಟ್ಟಿಲಿನಲ್ಲಿದ್ದ ಹಾಸಿಗೆಯ ಮೇಲು ಹೊದಿಕೆಯನ್ನು ಬದಲಿಸಿ, ತೊಳೆಯಬೇಕಾಗಿದ್ದ ಬಟ್ಟೆಗಳನ್ನು ತೆಗೆದಿಟ್ಟು ಕೈ ತೊಳೆಯಲೆಂದು 'ಬೇಸಿನ್' ಬಳಿ ಹೋಗುತ್ತಿದ್ದ ಪ್ರಭಾ ಸುಭದ್ರೆಯ ಮಾತು ಕೇಳಿ ನಗತೊಡಗಿದಳು.

'ಅದೇ ನಾನು ಹೇಳಿದೆನಲ್ಲ. ಮಗುವಿನ ಹಸಿವಿನ ಯೋಚನೆಗಿಂತಲೂ ನಿನ್ನ ಅರ್ಜುನನ ಚಿಂತೆ ನಿನಗೆ ಹೆಚ್ಚು. ಇನ್ನು ಕಾಶ್ಮೀರದಲ್ಲಿ ಅವನು ಏನು ಮಾಡುತ್ತಾನೆಯೋ ದೇವರಿಗೇ ಗೊತ್ತು. ಹತ್ತು ತಿಂಗಳಲ್ಲಿ ಒಮ್ಮೆಯಾದರೂ ರಜೆಯ ಮೇಲೆ ಬಂದು ಹೋಗಬಾರದಿತ್ತೇ. ನಿನ್ನನ್ನಲ್ಲದಿದ್ದರೆ ತನ್ನ ಅಭಿಮನ್ಯುವನ್ನಾದರೂ ನೋಡಿ ಹೋಗಲು?'

ಮಡಿಲಲ್ಲಿ ಮಗುವನ್ನು ಹಿಡಿದಿದ್ದ ಸುಭದ್ರೆಯ ಹಿಡಿತ ಇನ್ನಷ್ಟು ಬಿಗಿಯಾಯಿತು. ಮುಖ ತುಂಬ ತಾಯ್ತನದ ಸಂತೋಷ ಲಾಸ್ಯವಾಡತೊಡಗಿತು.

'ಹಬ್ಬಕ್ಕೆ ಖಂಡಿತ ಬರುತ್ತೇನೆಂದು ಬರೆದಿದ್ದಾರಲ್ಲ ಅತ್ತಿಗೆ!' ಎಂದಳು ಅತ್ತಿಗೆಯನ್ನು ಕುರಿತು.

'ಹೌದು, ಮೂರು ಬಾರಿ ಬರುತ್ತೇನೆಂದು ಹೇಳಿ ಮೋಸಗೊಳಿಸಿದ. ಇನ್ನು ಈಗ ಹಬ್ಬಕ್ಕೆ ಬರುತ್ತಾನೆಂದು ನಂಬಬೇಕೇ? ಬಂದಾನು ಬಿಡು, ಕಾಶ್ಮೀರ ಯುದ್ಧ ಮುಗಿದ ಮೇಲೆ. ಬರ್ಮಾ ಯುದ್ಧ ನಡೆಯುತ್ತಿದ್ದಾಗ ಮನೆಗೆ ಬರಲು ರಜೆ ಸಿಗುತ್ತಿತ್ತು ಅನಂತನಿಗೆ. ಈಗ ಕಾಶ್ಮೀರದಲ್ಲಿ ರಜೆಯೇ ಸಿಗುವುದಿಲ್ಲವಂತೆ. ಯಾರಾದರೂ ನಂಬಿಯಾರೇ ಇದನ್ನ!

'ಆದರೆ ಬಹಳ ಜವಾಬ್ದಾರಿಯ ಕೆಲಸ ಅತ್ತಿಗೆ. ಥಕ್ಕನೆ ರಜೆ ಸಿಗುವುದು ಸಾಧ್ಯವಿಲ್ಲ. . . . '

'ಬಿಡೆ ಸುಭಾ. ನನಗೆ ಗೊತ್ತಿದೆ. ಬರಬೇಕೆಂಬ ಇಚ್ಛೆಯಿದ್ದರೆ ರಜೆ ಸಿಕ್ಕಿಯೇ ತೀರುತ್ತದೆ. ನನ್ನನ್ನು ಮದುವೆಯಾಗುವಾಗ ಹೇಗೆ ರಜೆ ತೆಗೆದು ಕೊಂಡು ಓಡಿಬಂದ. ಆವಾಗ ಏನು ನಿಂತಿತ್ತೇ ಯುದ್ಧ ಅನಂತನ ಮದು ವೆಗಾಗಿ . . . .'

ತಮ್ಮನ ದೀರ್ಘಾವಧಿಯ ಅಗಲಿಕೆಯ ಬೇಸರ ಪ್ರಭಾನ ಮಾತಿನಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು.

ಸುಭದ್ರೆ ನಮ್ಮಗಾದುವನ್ನು ಕಂಡು, ಪ್ರಭಾ ಬಾಗಿಲೆಳೆದುಕೊಂಡು 'ಬೇಸಿನ್'ನ ಕಡೆ ಹೊರಟಳು.

ಹೊಟ್ಟೆ ತುಂಬಿ ತೃಪ್ತಿಯಿಂದ ಸುರೇಶ ಕಾಲುಂಳಿಸಿ ತಾಯಿಯ ಮೊಗ ವನ್ನು ನೋಡಿ ನಗುತ್ತಿದ್ದ. ಬ್ಯಾಸ್ ಗುಂಡಿಗಳೊಡನೆ ಆಟ ಮುಗಿಸಿ ಎದೆಯುದ್ದ ಇಳಿದು ಬಂದಿದ್ದ ತಾಯ ಜಡೆಯೊಡನೆ ಆಡತೊಡಗಿದ.

'ಅನಂತನ ಮದುವೆಗಾಗಿ ಯುದ್ಧ ನಿಂತಿತ್ತೇ!' ಅತ್ತಿಗೆಯ ಮಾತು ಸುಭದ್ರೆಯ ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ಇಲ್ಲ. ಯುದ್ಧ ನಿಂತಿರಲಿಲ್ಲ. ಯುದ್ಧರಂಗದಿಂದ ರಜೆ ಪಡೆದು ಬರುವುದು ಆಗ ಅನಂತನಿಗೆ ಸಾಧ್ಯವಿತ್ತು. ಈಗೇಕೆ ಇಲ್ಲ!

ಸ್ವಾಭಾವಿಕವಾಗಿ ತೊಟ್ಟಿಲ ಕಡೆ ಹೊರಳಿದ ದೃಷ್ಟಿ ಬಳಿಯ ಗೋಡೆ ಯಲ್ಲಿದ್ದ ಸ್ಟ್ಯಾಂಡಿನ ಮೇಲೊರಗಿದಾಗ ಅನಂತ ನಿಂತು ನಗುತ್ತಿದ್ದ. ಅವರು ನಿಂತು ನಗುತ್ತಿದ್ದರು. ಖಾಕೀ ಪೋಷಾಕಿನಲ್ಲಿ ಮದುವೆಯ ಮಾರನೆಯ ದಿನ ತೆಗಿಸಿದ ಭಾವಚಿತ್ರದಲ್ಲಿ ಅವರ ಗಂಭೀರ ಪ್ರಕೃತಿ ಮೂರ್ತಿಮತ್ತಾಗಿ

ಬಿದ್ದು ನಿಂತಿತ್ತು. 'ಮೊದಲ ಬಾರಿಗೆ ಅವರು ರೂಪಗ್ರಾಹಿಯ ಎದುರು ತನ್ನ ಭುಜದ ಮೇಲೆ ಕೈಯೂರಗಿಸಿ ನಿಂತಾಗ . . . . ! ಅಂದಿನ ಮಧುರ ಸ್ಮೃತಿ ಆಕೆಯನ್ನು ಕಾಡತೊಡಗಿತು. ಮಿಲಿಟರಿ ಸೇರಿದ್ದ 'ಅವರ'ನ್ನು ತಾನು ಮದುವೆಯಾಗಲು ಸಮ್ಮತಿ ಕೊಡಲು ಹಿಂದೆ ಮುಂದೆ ಯೋಚಿಸಿದ್ದ ಅಪ್ಪ ಕೂಡಾ ಅಂದು ರೂಪಗ್ರಾಹಿಯ ಎದುರು ನಿಂತ ಜೋಡಿಯನ್ನು ಕಂಡು 'ಇನ್ನಾದರೂ ಸುಖವಾಗಿರಮ್ಮಾ ಸುಭಾ' ಎಂದಿದ್ದ.

ಅಪ್ಪನ ಆಶೀರ್ವಚನ ಫಲಿಸಿತ್ತು. ಮದುವೆಯಾದ ಮೇಲೆ ಅವರು ಯುದ್ಧದಿಂದ ಮರಳುವ ತವಕದ ಪರೀಕ್ಷೆಯ ಭಯವಿಲ್ಲದಿದ್ದರೆ, ಸುಭದ್ರೆ ಹಿಗ್ಗಿನ ದಿನಗಳನ್ನು ಕಂಡಿದ್ದಳು. ಹಿಂದೆ ಅನುಭವಿಸಿದ ನೋವನ್ನು ಮದುವೆಯ ಮುಂದಿನ ಬದುಕು ಮರೆಸಲು ತುಂಬಾ ಸಹಾಯಕವಾಗಿತ್ತು.

ತನ್ನ ಪಾಲಿಗೆ ಮದುವೆಯ ಮುಂದಿನ ದಿನಗಳೆಲ್ಲ ಸುಖದ ದಿನಗಳೇ. ಅದೂ ಯುದ್ಧ ಮುಗಿದ ಮೇಲೆ ದೆಹಲಿಯಲ್ಲಿ ಕಳೆದ ಎರಡು ವರ್ಷಗಳಂತೂ ಮರೆಯಲಾಗದ ವರ್ಷಗಳು. ಆ ಹಿಗ್ಗು ಸದಾ ಉಳಿಯುವಂತೆ ಮಾಡಲು ಭೂಮಿಗಿಳಿದು ಬಂದ ಭೂಪತಿಯನ್ನು ಒಮ್ಮೆ ನೋಡಿ ಹೋಗಲೂ ಅವರಿಗೆ ರಜೆ ಸಿಗುವುದಿಲ್ಲವೆ?

ಮಂಗಲ ಸೂತ್ರ ಜಡೆಗೆ ಸಿಕ್ಕುಬಿದ್ದುದರಿಂದ ಸುರೇಶ ಜಡೆಯನ್ನೊಮ್ಮೆ ಬಲವಾಗಿ ಎಳೆದಾಗ ಸುಭದ್ರೆಯ ಕುತ್ತಿಗೆಗೆ ಸೂತ್ರದ ಕೊಂಡಿ ತಗಲಿ ನೋವಾಯಿತು. ಅವಳು ಯೋಚನೆಯನ್ನು ಅಲ್ಲಿಗೆ ನಿಲ್ಲಿಸಿ 'ಥೂ! ಕಳ್ಳ' ಎಂದು ಮಗುವನ್ನು ಗದರಿಸಿದಳು. ಹೊಟ್ಟೆ ತುಂಬಿದ್ದ ಮಗು ಕಿಲಕಿಲನೆ ನಗತೊಡಗಿತು. ಸುಭದ್ರೆಯ ಮೊಗ ಸಂತೋಷದಿಂದ ಮಲ್ಲಿಗೆಯಂತೆ ಅರಳಿತ್ತು.

ಮಗುವನ್ನು ಎರಡು ಕೈಗಳಿಂದಲೂ ಬಳಸಿ ಎದೆಗಾನಿಸಿಕೊಂಡು 'ಜೋ ಜೋ ಜೋ ಜೋ ಜೋ ಮುದ್ದು ಕಂದಾ. . .' ಎಂದು ತನಗೆ ಗೊತ್ತಿದ್ದ ಒಂದೇ ಒಂದು ಸಾಲನ್ನು ಜೋಗುಳ ಹಾಡತೊಡಗಿದಳು. ಊಟ, ಆಟ, ತೀರಿಸಿ ತಾಯ ಜೋಗುಳದ ಸಂಗೀತಕ್ಕೆ ಸುರೇಶ ನಿದ್ರಿಸಲು ಪ್ರಯತ್ನಿಸಿದ.

ಮಕ್ಕಳು ಸಂತೋಷದಿಂದ ಮಲಗಿರುವುದನ್ನು ಕಂಡಾಗ ದೇವರನ್ನು ಕಂಡಂತೆ ಆಗುತ್ತದೆ ಎಂದು ತಾನು ಎಳೆಯವಳಿರುವಾಗ ತಾಯಿ ಹೇಳಿದ ಮಾತೊಂದನ್ನು ಸುಭದ್ರೆ ಮರೆತಿರಲಿಲ್ಲ. ಏಕೋ ಈಗ ನಿದ್ರಿಸುತ್ತಿದ್ದ ಸುರೇಶನನ್ನು ನೋಡಿದಾಗ ಅದೇ ಮಾತು ನೆನಪಿಗೆ ಬಂತು. ತಾಯಿಯ ಮಡಿಲಲ್ಲಿ

ತುಂಬಿದ ಹೊಟ್ಟೆಯಿಂದ, ತುಂಬಿದ ತೃಪ್ತಿಯಿಂದ ಮಲಗಿದ ಆ ಮುದ್ದು ಮೊಗದಲ್ಲಿ ಎಂಥ ನಿರಾಸಕ್ತಿಯ ಸ್ನಿಗ್ಧ ಗಾಂಭೀರ್ಯ!

'ನೀನು ದೊಡ್ಡವನಾಗಿ 'ಏರ್ ಮಾರ್ಶಲ್'' ಆಗು ಸುರೇಶಾ. ಯಾವಾಗಲೂ ಇಂಥ ನಗೆಗಳಲ್ಲೇ ಬೆಳೆದು ಅರಮನೆಯ ಸೌಭಾಗ್ಯ ಕಾಣು ಸುರೇಶಾ... ನಗುವಿನಲ್ಲಿ ಶಕ್ತಿಯಲ್ಲಿ, ಪ್ರೀತಿಯಲ್ಲಿ ನಿನ್ನ ಅಪ್ಪನನ್ನೂ ಮೀರು ಸುರೇಶಾ....' ಎಂದು ಮನಸಿನಲ್ಲೇ ಸುಭದ್ರೆ ಮಗುವಿಗೆ ಹರಸುವಿಕೆಯ ಸುರಿಮಳೆಗರೆದಿದ್ದಳು

ಆ ರೀತಿಯ ಹಾರೈಕೆಗೊಂದು ಹಿನ್ನೆಲೆಯಿತ್ತು.

ಮದುವೆಯ ಮುಂದಿನ ದಿನಗಳಲ್ಲಿ, ಆಕೆಯ ಗತಜೀವನದ ನೆನಹನ್ನು ಆಗಾಗ ತಂದುಕೊಡುತ್ತಾ, ಬೆನ್ನಿಗೇ ಅಂಟಿಕೊಂಡಿದ್ದುದು ಒಂದು ದುರಂತ ಸ್ಮೃತಿ ಮಾತ್ರ.

ಅದು ತಮ್ಮ ರಮೇಶನ ಅಕಾಲ ಮರಣ.

ಈಗ ಬದುಕಿ ಉಳಿದಿದ್ದರೆ ಹನ್ನೆರಡು ತುಂಬಬಹುದಾಗಿತ್ತು. ಮದುವೆಯಾದ ಮೇಲೆ, ಯುದ್ಧದಿಂದ ಅವರು ಮರಳಿ ಬಂದಮೇಲೆ ತನ್ನೊಡನೆಯೇ ಆತನನ್ನು ದೆಹಲಿಗೆ ಕರೆದುಕೊಂಡು ಹೋಗಬಹುದಿತ್ತು.

ದೆಹಲಿಯಲ್ಲಿ ತನ್ನ ಆರೈಕೆಯಲ್ಲಿ ರಮೇಶ ಚಿಕ್ಕಮ್ಮನ ಕೈಯಲ್ಲಿ ಪಟ್ಟ ಕಷ್ಟಗಳನ್ನೆಲ್ಲ ಮರೆಯಬಹುದಾಗಿತ್ತು.

ಆದರೆ ರಮೇಶ ಹೋಗಿಯೇ ಬಿಟ್ಟ. ಚಿಕ್ಕಮ್ಮನಿಂದಾಗಿಯೇ ಆತ ಅಕಾಲ ಮರಣಕ್ಕೊಳಗಾದ.

ರಮೇಶನ ವಿಚಾರ ಯೋಚಿಸಲು ಆರಂಭಿಸಿದ ಸುಭದ್ರೆಗೆ ಮಗು ನಿದ್ರಿಸಿದ; ತೊಟ್ಟಿಲಿನಲ್ಲಿ ಮಲಗಿಸುವುದು ಒಳ್ಳೆಯದು ಎಂದು ಕೂಡಾ ಹೊಳೆಯಲಿಲ್ಲ. ಮಗುವನ್ನು ಹಿಡಿದು ನೋಷಾಕ್ಕ್ಯಾರಗಿ ಕುಳಿತಿದ್ದಂತೆಯೇ ಮನಸು ರಮೇಶನ ಕೊನೆಯ ದಿನಗಳನ್ನು ಸ್ಮರಿಸಿಕೊಳ್ಳುತ್ತಿತ್ತು.

'ನಿನ್ನ ಮದುವೆಯಾದ ಮೇಲೆ ನಿನ್ನ ಜೊತೆಯಲ್ಲೇ ಬಂದುಬಿಡುತ್ತೇನೆ ಅಕ್ಕ. ಚಿಕ್ಕಮ್ಮನ ಕಾಟ ಬಹಳಾಗುತ್ತೆ.' ಎಂದಿದ್ದ ರಮೇಶ ಎಂದೋ ಒಂದು ದಿನ.

ಅಸಹನೀಯ ನಿಂದೆ ನಿಷ್ಠುರಗಳು ಎಳೆಯ ಹೃದಯವೊಂದರ ಮೇಲೆ ಮಾಡಿದ ಪ್ರತಿಕ್ರಿಯೆ ಪರಿಣಾಮಗಳ ಒಟ್ಟು ಮೊತ್ತದ ಮಾತದು.

'ಅಮ್ಮ ತೀರಿಹೋದಾಗ ಅಪ್ಪ ಏಕೆ ಚಿಕ್ಕಮ್ಮನನ್ನು ಮದುವೆಯಾದ? .... ಆ ಮಾರಿ ಮನೆಗೆ ಬಂದಂದಿನಿಂದ ಯಾರಿಗಾದರೂ, ಅಪ್ಪನಿಗಾದರೂ, ಸುಖ ಕೊಟ್ಟಳೇ? ಇಲ್ಲವಾದಲ್ಲಿ ತನ್ನ ಮದುವೆಯ ಕಾಲದಲ್ಲಿ ಅಪ್ಪ 'ಇನ್ನಾದರೂ ಸುಖವಾಗಿರಮ್ಮಾ' ಎನ್ನುತ್ತಿದ್ದನೇ?'

ಆದರೂ ರಮೇಶ ಪಟ್ಟ ಕಷ್ಟ ತಾನು ಪಟ್ಟಿರಲಿಲ್ಲ. ಬೆಳೆದ ಹುಡುಗಿಯೆಂದು ಹೆದರಿ ತನ್ನನ್ನು ಶಿಕ್ಷೆಗೊಳಪಡಿಸಲು ಹಿಂಜರಿದಳೇ ಏನೆಂದು ಸುಭದ್ರೆಗೆ ಇನ್ನೂ ಸಮಸ್ಯೆಯಾಗಿಯೇ ಉಳಿದಿತ್ತು.

ಆದರೆ ರಮೇಶನ ಹಿಂಸೆಯಲ್ಲಿ ಚಿಕ್ಕಮ್ಮ ಪಟ್ಟ ಆನಂದ!

ತನ್ನ ಕೆಲಸವಾಯಿತು. ತಾನಾಯಿತು ಎಂದು ಕುಳಿತಿದ್ದ ಅಪ್ಪನೂ ಈ ರೀತಿಯ ಹಿಂಸೆಯನ್ನು ತಡೆಯಲಿಲ್ಲ. ತಡೆಯಬೇಕಿತ್ತು, ಆದರೆ ತಡೆಯಲಿಲ್ಲ. ಒಂದೆರಡು ಬಾರಿ ಚಿಕ್ಕಮ್ಮನನ್ನು ಗದರಿಸಿದಾಗ ಅಪ್ಪನ ಮೇಲೆಯೇ ಹಾರಿಬಿದ್ದ ರಾಕ್ಷಸಿ ಆವಳು!

ಹೌದು ರಾಕ್ಷಸಿಯಲ್ಲದಿದ್ದರೆ ಮಲೇರಿಯಾದಿಂದ ಎದ್ದು ಎರಡು ದಿನಗಳಾಗದಿದ್ದಾಗ ರಮೇಶನನ್ನು ಮಿಲ್ಲಿಗೆ ತರಲೆಂದು ಪೇಟೆಗೆ ಕಳುಹಿಸುತ್ತಿದ್ದಳೇ?

'ನಾನು ಹೋಗುವುದಿಲ್ಲ ಚಿಕ್ಕಮ್ಮಾ; ಏನೂ ಕೊಡುವುದಿಲ್ಲ ಚಿಕ್ಕಮ್ಮಾ' ಎಂದು ಹಲುಬಿದರೂ ಅವಳಿಗೆ ಕರುಣೆ ಬಂತೇ?

'ನಾನು ತರುತ್ತೇನೆ ಚಿಕ್ಕಮ್ಮಾ, ರಮೇಶ ಇನ್ನೂ ಜ್ವರದಿಂದ ಸರಿಯಾಗಿ ಎದ್ದಿಲ್ಲ. ಅವನನ್ನು ಯಾಕೆ ಪೇಟೆಗ ಕಳುಹಿಸುತ್ತಿ' ಎಂದು ತಾನು ಹೇಳಿದಾಗ ಸಿಟ್ಟಿನಿಂದ ಕಿಡಿಕಿಡಿಯಾಗಿದ್ದಳು.

'ಹೌದು ಜ್ವರ ಬಿಟ್ಟು ನಾಲ್ಕು ದಿನವಾಯಿತು. ಎರಡು ಫರ್ಲಾಂಗು ನಡೆದು ಎರಡು ದಂಡೆಮಲ್ಲಿಗೆ ತರಲು ಸಾಧ್ಯವಿಲ್ಲವೆ? ಅಥವಾ ನನ್ನನ್ನು ಸಿಟ್ಟಿಗೆಬ್ಬಿಸಬೇಕೆಂದು ನೆಪವೇ?'

'ಇಲ್ಲ ಚಿಕ್ಕಮ್ಮಾ, ಅವನು ಮಲಗಿರಲಿ. ನಾನೇ ಹೋಗುತ್ತೇನೆ' ಎಂದು ತಾನು ಸಮಾಧಾನದಿಂದ ಹೇಳಿದಾಗಲೂ ಆಕೆ ಒಪ್ಪಿರಲಿಲ್ಲ. 'ನೀನು ಹೋಗಿ ಇನ್ನು ಬೀದಿಯಲ್ಲಿ ರಾಣಿಯಂತೆ ಮೆರೆಯುವುದೊಂದು ಬಾಕಿ. ಮದುವೆಯಾಗಿದ್ದರೆ ಇಷ್ಟರಲ್ಲೇ ಎರಡು ಮಕ್ಕಳಾಗಬಹುದಿತ್ತು.'

ರಮೇಶ ಸಿಟ್ಟಿನಿಂದೆದ್ದು ಹೋಗಿದ್ದಾತ ಹತ್ತು ನಿಮಿಷಗಳ ನಂತರ ಬಂದಾಗ ಆತನ ಮುಖ ಯಾವ ರೀತಿ ಬಾಡಿತ್ತು! ಮೈ ಹೇಗೆ ನಡುಗುತ್ತಿತ್ತು!

ತಂದ ಎರಡು ಚೆಂಡುಮಲ್ಲಿಗೆಗಳನ್ನು ಸಿಟ್ಟಿನಿಂದ ಚಿಕ್ಕಮ್ಮನ ಮುಖದ ಮೇಲೆ ಒಗೆದಿದ್ದ.

ಆ ರೀತಿಯ ಅಪಮಾನವನ್ನು ಸಹಿಸಲಾರದೆ ಓಡಿಬಂದು ಹೊಡೆಯ ಲಾರಂಭಿಸಿದ್ದಳು, ರಮೇಶಗೆ. ತಾನು ತಡೆಯಲು ಹೋದುದೂ ಫಲಕಾರಿ ಯಾಗಲಿಲ್ಲ. ಆ ಹೊಡೆತದ ನೋವನ್ನು ಸಹಿಸಲಾರದೆ ಆತ ಕಣ್ಣೀರಿಳಿಸು ತ್ತಿದ್ದಾಗ ತಾನು ಕೇಳಲೇಬೇಕಾಗಿ ಬಂದಿತ್ತು.

'ಏನು ಕೊಂದು ಹಾಕುತ್ತೀಯಾ ಚಿಕ್ಕಮ್ಮ ರಮೇಶನ್ನ!' ಎಂದು.

'ಸಾಕೇ ಗಯ್ಯಾಳಿ. ನಾನು ಅವನನ್ನು ಕೊಲ್ಲುವುದೇ ಅವನು ನನ್ನನ್ನು ಕೊಲ್ಲುವುದೇ? ಮಲ್ಲಿಗೆಯಿಂದ ಮುಖಕ್ಕೆ ಹೊಡೆದ, ಹುಡುಗ ನಾಳೆ ಏನು ಮಾಡಲಿಕ್ಕಿಲ್ಲ.'

ಆದರೂ ಆ ಮಾತು ಹೇಳಿ ಹೊಡೆತ ನಿಲ್ಲಿಸಿದ್ದಳು.

ರಮೇಶ ಬಂದು ತನ್ನ ಸೀರೆಯ ಸೆರಗಿನಿಂದ ಕಣ್ಣೊರಸಿಕೊಳ್ಳುತ್ತಾ.

'ಅಮ್ಮ ಈಗ ಎಲ್ಲಿದ್ದಾಳಕ್ಕಾ' ಎಂದಿದ್ದ. ಆಗಲೇ ಆತನ ಮ್ಮುಬಿಸಿ ಯಾಗಿತ್ತು.

ಆ ಒಂದು ಮಾತಿನಲ್ಲಿ ಕರುಳು ಕೊರೆಯುವ ವೇದನೆ ತುಂಬಿತ್ತು.

ಅಂದು ಜ್ವರದಿಂದ ಮಲಗಿದ ರಮೇಶ ಏಳಲೇ ಇಲ್ಲ. ಜ್ವರ ವಿಪರೀತ ವಾಗಿ ಎಷ್ಟು ಬೇಗ ತೀರಿಕೊಂಡ!

ಅಪ್ಪ ಚಿಕ್ಕಮ್ಮನನ್ನು ಒಂದೆರಡು ಬಾರಿ ಚೆನ್ನಾಗಿ ಬೈದುದಲ್ಲದೆ ಮತ್ತೇ ನನ್ನು ಮಾಡಿದ. ಏನೂ ಇಲ್ಲ. ರಮೇಶನ ಸಾವು ಪರಿಣಾಮ ಮಾಡಿದುದು ತನ್ನೊಬ್ಬಳ ಮೇಲೆ ಮಾತ್ರ.

ತಾನು ದೆಹಲಿಗೆ ಹೋಗುವ ತನಕ ಆತ ಬದುಕಿ ಉಳಿದಿದ್ದರೆ!

ಪುಟ್ಟ ರಮೇಶ ಪಟ್ಟ ಕಷ್ಟ ಯಾರೂ ಪಡಬಾರದು. ಆ ರೀತಿಯ ಅವಸ್ಥೆ ಯಾರಿಗೂ ಬರಬಾರದು. ತನ್ನ ಸುರೇಶನಿಗೆ ಕೂಡಾ....

ಇದೇ ಕಳವಳ ಅವರು ಕಾಶ್ಮೀರಕ್ಕೆ ಹೋಗುವ ಮುನ್ನಾ ದಿನ ಅವರನ್ನು ತಾನು ಪ್ರಶ್ನಿಸುವಂತೆ ಮಾಡಿತ್ತು.

'ನನ್ನನ್ನು ಹೆರಿಗೆಗೆ ಮುಂಬಯಿಗೇ ಕಳುಹಿಸಿಕೊಡುತ್ತೀರಾ.'

ಅವರು ಆಶ್ಚರ್ಯದಿಂದ ಕೇಳಿದ್ದರು.

'ಎಂಥ ಪ್ರಶ್ನೆ ಸುಭಾ. ನಾನು ದೆಹಲಿಯಲ್ಲಿಲ್ಲದಾಗ ನೀನು ಇಲ್ಲಿ

ನಿಲ್ಲುವುದು ಸಾಧ್ಯವೇ? ಅಲ್ಲಿ ಪ್ರಭಾ ಚೆನ್ನಾಗಿ ನೋಡಿಕೊಳ್ಳುತ್ತಾಳೆ ಬಿಡು.'

'ಅದಕ್ಕಾಗಿಯಲ್ಲ ನಾನು ಹೇಳಿದ್ದು. ಹೆರಿಗೆಯ ಸಮಯ ನೀವಿರುವುದಿಲ್ಲ!'

'ಹೇಗೆ ಬರಲಿ ಸುಭಾ....ಪುನಃ ಯುದ್ಧಕ್ಕೆ ಹೋಗುತ್ತಿದ್ದೇನೆ.'

ಕ್ಷಣಕಾಲ ಆಕೆ ಮೌನವಾಗಿದ್ದಳು. ಆ ಮೇಲೆ ರಮೇಶನನ್ನು ಜ್ಞಾಪಿಸಿಕೊಂಡು ಹೇಳಿದ್ದಳು.

'ನನಗೇನಾದರೂ ಆದರೆ....ನೀವು, ಮಗುವನ್ನು....'

ಅವರು ನಗುತ್ತಾ ಮೆಲ್ಲಗೆ ಕೆನ್ನೆಯ ಮೇಲೆ ಏಟು ಕೊಟ್ಟಿದ್ದರು.

'ಹುಚ್ಚು ಹುಡುಗಿ. ಯಾರಾದರೂ ಈ ರೀತಿ ಹೆದರುತ್ತಾರೆಯೋ' ಎಂದು. ಆನಂತರ ಅವರಿಗೆ ತಿಳಿದಿರಲೇಬೇಕು ತಾನು ರಮೇಶನ ಸಾವನ್ನು ಯೋಚಿಸಿಕೊಂಡು ಹೀಗೆ ಹೇಳುತ್ತಿದ್ದೇನೆಂದು.

'ಏರ್ ಮಾರ್ಶಲ್'–ಅಲ್ಲ 'ಕಮಾಂಡರ್ ಇನ್ ಚೀಫ್' ಆಗಿ ಬರುವವನ ತಾಯಿ ಈ ರೀತಿ ಹೆದರಬಾರದು ಸುಭಾ' ಎಂದು ಮುನ್ನೊಮ್ಮೆ ಹೇಳಿದ್ದರು. ಅಂದಿಗೆ ಅವಳ ಕಳವಳ ನಿಂತಿತ್ತು.

ಮುಂಬಯಿಗೆ ಬಂದು ಸುಖಪ್ರಸವವಾಯಿತು. ಪುಟ್ಟ ಸುರೇಶ ಕಮಾಂಡರ್ ಚೀಫ್ ಆಗುವಂತೆಯೇ ಬೆಳೆಯುತ್ತಿದ್ದಾನೆ. ಆದರೆ ಈ ಹತ್ತು ತಿಂಗಳಲ್ಲಿ ಒಂದು ಬಾರಿಯಾದರೂ ಬಂದು ನೋಡಿಕೊಂಡು ಹೋಗುವುದು ಬೇಡವೆ? ಅತ್ತಿಗೆ ಹೇಳಿದ್ದು ಪೂರಾ ಸುಳ್ಳಲ್ಲ. ಮೂರು ಬಾರಿ ಬರುವೆನೆಂದು ಹೇಳಿ ಮೋಸ ಮಾಡಿವರು.

ಆದರೂ ಕಷ್ಟದ, ಯುದ್ಧರಂಗದ ಜೀವನ. ಬೇಕೆಂದೇ ಯಾರಾದರೂ ಬಾರದಿರುತ್ತಾರೆಯೇ. ರಜೆ ಸಿಗುವುದೇ ಕಷ್ಟವಾಗಿರಬೇಕು.

ನಿದ್ರಿಸಿದ ಸುರೇಶನ ತಲೆಯ ಮೇಲೆ ಸುಭದ್ರೆ ಕೈಯಾಡಿಸಿದಳು. ರಮೇಶನೂ ಮಗುವಿರುವಾಗ ಹೀಗೆಯೇ ಇದ್ದಿದ್ದ. ಆತನನ್ನು ಎತ್ತಿ ಆಡಿಸುವ ಸಂಭ್ರಮದ ಹಿಗ್ಗಿನ ದಿನಗಳೂ ಕೆಲವು ಇದ್ದವು.

'ಇಲ್ಲ ಸುರೇಶಾ . . . ನಿನಗೆ ಎಂದೂ ಅಂತಹ ಕಷ್ಟ ಬರುವುದಿಲ್ಲ' ಎಂದಂದುಕೊಂಡಳು ಸುಭದ್ರೆ. ಯೋಚನೆಯ ಚಕ್ರಗತಿಗೆ ಸಿಕ್ಕಿದುದರಿಂದ ಆಕೆಯ ಕಣ್ಣುಗಳು ಒದ್ದೆಯಾಗಿದ್ದವು.

ಹೊರಬಾಗಿಲಿನ ಬೆಲ್ ಬಾರಿಸಿದಾಗ ಸುಭದ್ರೆ ಎಚ್ಚೆತ್ತಳು. ಒಳಗೆ ಅಡುಗೆಯ ಮನೆಯಿಂದಲೇ ಪ್ರಭಾ ಕೂಗಿದ್ದಳು.

'ನೋಡು ಸುಭಾ. ಯಾರೋ ಬಂದಿದ್ದಾರೆ. ಪೋಸ್ಟ್‌ಮ್ಯಾನ್ ಇರಬೇಕು' ಎಂದು.

ಸುಭದ್ರೆ ಗಡಿಬಿಡಿಯಿಂದ ಎದ್ದರೂ ಸುರೇಶನಿಗೆ ಎಚ್ಚರವಾಗದಂತೆ ಆತನನ್ನು ತೊಟ್ಟಿಲಿನಲ್ಲಿ ಮಲಗಿಸಿ ಹೊರ ಬಾಗಿಲು ತೆರೆಯಲೆಂದು ಹೋದಳು.

ಬಂದುದು ನಿಜಕ್ಕೂ ಪೋಸ್ಟ್‌ಮ್ಯಾನ್.

ಅವನು ತಂದುದು ಕಾಶ್ಮೀರದ ಕಾಗದ.

ತಮ್ಮನ ಕಾಗದದ ಪರೀಕ್ಷೆಯಲ್ಲಿಯೇ ಇದ್ದ ಪ್ರಭಾ ಕೂಡಾ ಅಡುಗೆಯ ಮನೆಯಿಂದ ಓಡಿಯೋಡಿ ಬಂದಳು.

'ಬಂತೇನೇ ಸುಭಾ ಅನಂತನ ಕಾಗದ' ಎಂದು ಕೇಳುತ್ತಾ.

ಕಾಗದ ಪಡೆದು ಬಿಡಿಸಿ ಓದುತ್ತಿದ್ದಂತೆಯೇ ಸುಭದ್ರೆ ಉತ್ತರ ಕೊಟ್ಟಳು.

'ಹೌದು ಅತ್ತಿಗೆ, ದೀಪಾವಳಿಗೆ ಖಂಡಿತ ಬರುತ್ತೇನೆ, ಹತ್ತು ದಿನಗಳ ರಜೆಯ ಮೇಲೆ, ಎಂದು ಬರೆದಿದ್ದಾರೆ.'

'ಅಂತೂ ಬರುತ್ತಾನೆ ಹಾಗಾದರೆ. ಬರುವಾಗ ಶ್ರೀನಗರದಿಂದ ಎರಡು ರಗ್ಗು ತರಲಿಕ್ಕೆ ಮರೀಬೇಡಾಂತ ಬರೆದುಬಿಡು ನೀನು ಉತ್ತರ ಬರೆಯುವಾಗ. ದೀಪಾವಳಿಗೆ ಇನ್ನೂ ತಿಂಗಳಿದೆಯಲ್ಲ' ಎಂದು ಪ್ರಭಾ ಮರಳಿ ತನ್ನ ಕೆಲಸದತ್ತ ನಡೆದಳು.

ಕಾಗದವನ್ನು ಓದುತ್ತಲೇ ಕೋಣೆಗೆ ಮರಳಿದ ಸುಭದ್ರೆ ತೊಟ್ಟಿಲಿನ ಬಳಿ ನಿಂತು 'ನಿನ್ನಪ್ಪನ ಕಾಗದ ಬಂದಿದೆ ನೋಡು ಸುರೇಶಾ . . . ' ಎಂದು ಸೋಫದ ಮೇಲೊರಗಿ ಕುಳಿತು ಕಾಗದವನ್ನು ಸರಿಯಾಗಿ ಓದತೊಡಗಿದಳು.

ಈ ಬಾರಿಯ ಕಾಗದ ಬರೇ ಕ್ಷೇಮ ಪತ್ರವಾಗಿರದೆ ಸ್ವಲ್ಪ ದೀರ್ಘವಾಗಿಯೇ ಇತ್ತು.

೨೮-೯-೧೯೪೮.

ಪ್ರೀತಿಯ ಸುಭಾ,

ನಿನ್ನ ಕಾಗದ ತಲುಪಿದೆ. ಮೂರು ಬಾರಿ ಬರುತ್ತೇನೆಂದು ಹೇಳಿ ಬರಲಾಗದಿದ್ದುದಕ್ಕೆ ನಾನು ಯಾವ ರೀತಿ ಕ್ಷಮೆ ಬೇಡಲಿ! ಮಹಾಯುದ್ಧದ ಕಾಲದಲ್ಲಿ ನಾನು ಕೆಲಸದಲ್ಲಿದ್ದ ರೀತಿಗೂ ಈಗ ಕೆಲಸದಲ್ಲಿರುವ ರೀತಿಗೂ ತುಂಬಾ ವ್ಯತ್ಯಾಸವಿದೆಯೆಂದು ನಿನಗೆ ಗೊತ್ತೇ ಇದೆ. ಈಗಿನ ಯುದ್ಧದಲ್ಲಿ ಅಭಿಮಾನದ, ಸ್ವಾಭಿಮಾನದ ಪ್ರಶ್ನೆ ಇದೆ. ಆ ಕಾರಣ ಸುಳ್ಳು ನೆಪ ಕೊಟ್ಟು

ತಪ್ಪಿಸಿಕೊಂಡು ಬರಲು ಸಾಧ್ಯವಾಗುವುದಿಲ್ಲ. ಆದರೂ ದೀಪಾವಳಿಯ ಸಮಯ ಹತ್ತು ದಿನಗಳ ರಜೆ ಸಿಗಬಹುದೆಂದು ಆಶ್ವಾಸನೆ ದೊರಕಿದೆ. ಆಗ ಬಂದೇ ತೀರುತ್ತೇನೆ. ನಿನ್ನನ್ನೂ ಯುವರಾಜನನ್ನೂ ನೋಡುವ ಆತುರವನ್ನು ತಡೆಹಿಡಿಯುವುದು ಬಹಳ ಪ್ರಯಾಸದ ಮಾತಾಗಿದೆ.

ಆದರೂ ನಾನಿಪ್ಪ, ಇರುವ, ತಿರುಗುವ ತಾಣಗಳಲ್ಲಿ ಕಂಡ, ಕಾಣುತ್ತಿರುವ ದುಃಖದ ದೃಶ್ಯಗಳನ್ನು ನೆನಪಿಗೆ ತಂದುಕೊಳ್ಳುವಾಗ, ನನಗೆ ಒಂದು ಕರ್ತವ್ಯದ ಹೋರಾಟದಲ್ಲಿ ಖಂಡಿತವಾಗಿ ಧುಮುಕಿದ್ದೇನೆಂದು ಭಾಸವಾಗುತ್ತದೆ. ನನ್ನಿಂದ ಈ ರೀತಿಯ ಮಾತು ಹೊರಬರುವುದು ನಿನಗೆ ಆಶ್ಚರ್ಯವನ್ನುಂಟುಮಾಡಬಹುದು. ಮೋಜಿಗಾಗಿ, ಉತ್ಸಾಹಕ್ಕಾಗಿ, ಸಾಹಸಕ್ಕಾಗಿ R. I. A. F. ಎಂದೆನ್ನುತ್ತಿದ್ದ ನಾನು ಇವತ್ತು ಕರ್ತವ್ಯಕ್ಕಾಗಿ R. I. A. F. ಎನ್ನುತ್ತಿದ್ದೇನೆ.

ಮೊನ್ನೆ ಒಂದು ದೊಡ್ಡ ಕುತ್ತಿನಿಂದ ಪಾರಾದೆ. ೧೯೦೦೦ ಅಡಿ ಎತ್ತರದಲ್ಲಿ ಹಿಮ ತುಂಬಿದ ಪರ್ವತದಲ್ಲಿ ಆ ಕುತ್ತಿನಿಂದ ಪಾರಾದಾಗ ನಿನ್ನ ಮತ್ತು ಸುರೇಶರನ್ನು ನೆನಸಿಕೊಂಡೆ. ಆ ಸ್ಥಳ ಯಾವುದೆಂದು ನಾನು ಇಲ್ಲಿ ತಿಳಿಸುವುದು ಸಾಧ್ಯವಿಲ್ಲ. ಅಲ್ಲಿ 'ಪೆಟ್ರೋಲ್ ಡ್ಯೂಟಿ' ಮಾಡುತ್ತಿದ್ದ ನಮ್ಮ ಸೈನಿಕರಿಗೆ ಆಹಾರದ ಸರಬರಾಯಿ ಮಾಡುತ್ತಿದ್ದ ನಾಲ್ಕು ವಿಮಾನಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಹೊಣೆಗಾರಿಕೆ ಅಕಸ್ಮಾತ್ತಾಗಿ ನನ್ನ ಪಾಲಿಗೆ ಬಂದಿತ್ತು. ಹಾಗೆ ಹೋದಾಗ ವಿಮಾನದಿಂದ ಇಳಿದು ನಮ್ಮ ಶಿಬಿರದ ಕಡೆಗೆ ತಿರುಗುತ್ತಿದ್ದೆ. ಆ ಗುಡ್ಡದ ಇನ್ನೂರು ಗಜಗಳಾಚೆ ಧಾಳಿಕಾರರಿರುವರೆಂದು ನಮಗೆ ತಿಳಿದಿತ್ತು. ಆದರೆ ಇಪ್ಪತ್ತೇ ಗಜಗಳ ದೂರದಿಂದ, ಒಂದು ಎತ್ತರದ ದಿನ್ನೆಯಿಂದ 'ಮೆಶಿನ್ ಗನ್' ಬೆಂಕಿ ಹೊರಡಲಾರಂಭಿಸಿದಾಗ ಕೂಡಲೇ 'ಕವರ್' ತೆಗೆದುಕೊಳ್ಳಬೇಕಾಗಿ ಬಂತು. ಆದರೂ ಗುಂಡೊಂದು ನನ್ನ ಬಳಿಯಿಂದಲೇ ಹಾದು ಹೋದುದನ್ನು ನಾನು ಮರೆಯಲಾರೆ, ಆ ಮೇಲೆ ನಮ್ಮ 'ಪೆಟ್ರೋಲ್ ಡ್ಯೂಟಿ'ಯ ಸೈನಿಕರು ಕೆಲಸ ಆರಂಭಿಸಿದಾಗ ಅವರೆಲ್ಲಾ ಕುರಿಗಳಂತೆ ಚೆದರಿದರು. ಆದರೂ ಆ ಒಂದು ನಿಮಿಷ – ಅಂಥಾ ನಿಮಿಷಗಳೂ ಹಿಂದೆಯೂ ಬಂದಿದ್ದವು ಸುಭಾ – ಆದರೂ ಆ ಸಮಯದಲ್ಲಿ ನಿನ್ನನ್ನೂ ಸುರೇಶನನ್ನೂ ಚೆನ್ನಾಗಿ ನೆನಸಿಕೊಂಡೆ.

ಈಗ ಎಲ್ಲಾ ಸರಿಯಾಗುತ್ತಿದೆ ಬಿಡು. ಆ ಮೇಲೆ ಎರಡು ದಿನಗಳ

ಮುಟ್ಟಿಗೆ ನನಗೆ ಶ್ರೀನಗರಕ್ಕೆ ಹೋಗಬೇಕಾಗಿ ಬಂದಿತ್ತು. ಅಲ್ಲಿ ಈ ಧಾಳಿಕಾರರ ದಾವಳಿಯಿಂದ ಕಷ್ಟಪಟ್ಟ ಒಂದು ಕುಟುಂಬದಲ್ಲಿ ಉಳಿದ ಒಂದು ತಾಯಿ ಮತ್ತೊಂದು ಪುಟ್ಟ ಮಗು – ಸಾಧಾರಣ ನಾಲ್ಕಾರು ವರ್ಷಗಳಾಗಬಹುದು – ಅವರನ್ನು ಮಾತನಾಡಿಸುವ ಪ್ರಸಂಗಬಂದಿತ್ತು. ಆ ದುಃಖದ ಕತೆಯೆಲ್ಲಾ ಬರೆದರೆ ನೀನು ಅಳುತ್ತಲೇ ಕುಳಿತುಕೊಂಡೀಯೆ ಸುಭಾ. ಇನ್ನೇನೂ ಬರೆಯಬಾರದು. ಅವರೂ ಕರ್ತವ್ಯಕ್ಕಾಗಿ R. I. A. F. ಎಂದು ಹೇಳಿದೆನಲ್ಲ – ಆ ಮಾತು ಸತ್ಯ ಎಂತ ನಿನಗೆ ತೋರಿಸಿಕೊಡಲು ಬರೆದಿದ್ದೇನೆ. ದೇವರ ದಯದಿಂದ ಇನ್ನು ಸ್ವಲ್ಪ ಸಮಯದಲ್ಲಿಯೇ ಎಲ್ಲಾ ಸರಿಯಾದೀತೆಂದು ಕಾಣುತ್ತದೆ.

ಪ್ರಭಾ ಮತ್ತು ಭಾವ ಹೇಗಿದ್ದಾರೆ? ಪ್ರಭಾನ ಸಿಟ್ಟು ಇಳಿದಿದೆಯೇ. ದೀಪಾವಳಿಗೆ ಖಂಡಿತ ಬರುತ್ತೇನೆಂತ ಹೇಳು. ಇನ್ನು ಈ ಸಲ ಕೂಡಾ ಉತ್ತರ ಬರೆಯುವಾಗ "ಶ್ರೀನಗರದಿಂದ ಎರಡು ರಗ್ಗು ತರಬೇಕೆಂತ ಅತ್ತಿಗೆ ಹೇಳಿದ್ದಾರೆ" ಎಂದು ಬರೆಯಬೇಡ. ಆಗಲೇ ನಾಲ್ಕು ರಗ್ಗು ತೆಗದಿಟ್ಟಿದ್ದೇನೆ.

'ಏರ್ ಮಾರ್ಶಲ್' ಯುವರಾಜ ಹೇಗಿದ್ದಾನ?

ಸದಾ ನಿನ್ನ

ಅನಂತ.

ಕಾಗದ ಎರಡನೆಯ ಬಾರಿ ಓದಿ ಮುಗಿಸಿದಾಗ ಸುಭದ್ರೆಯ ಹಣೆ ತುಂಬ ಬೆವರ ಹನಿಗಳು ಮೂಡಿದ್ದವು. 'ಸುರೇಶನಿಗೆ ಮೂಸುಂಬಿ ರಸ ಕೊಟ್ಟೆಯೇನ ಸುಭಾ' ಎಂದು ಕೇಳುತ್ತಾ ಮೂಸುಂಬಿ ರಸ ಹಿಡಿದುಕೊಂಡೇ ಬಂದ ಪ್ರಭಾ ಸುಭದ್ರೆಯನ್ನು ಕಂಡು 'ಏನಾಯಿತೇ? ಏನು ಬರೆದಿದ್ದಾನೆಯೇ ಕಾಗದದಲ್ಲಿ?' ಎಂದು ಕೇಳಿದಾಗ ಸುಭದ್ರೆಗೆ ಎಚ್ಚರವಾಯಿತು.

'ಏನಿಲ್ಲ ಅತ್ತಿಗೆ. ಏನೋ ಒಂದು ಗಂಡಾಂತರದಿಂದ ಪಾರಾದೆ ಎಂದು ಬರೆದಿದ್ದಾರೆ ಅದನ್ನೇ ಯೋಚಿಸುತ್ತಾ ಇದ್ದೆ. ಹೇಗಾದರೂ ಬೇಗನೇ ಅವರು ಬಂದಿದ್ದರೆ ಸಾಕು. ಯುದ್ಧ ನಡುವದಲ್ಲಿಯೇ ಮುಗಿಯುತ್ತದಂತೆ.'

'ಅವನ ಸ್ವಭಾವವೇ ಹಾಗೆ ನೋಡು. ಬೇಡವಾದ ಕೆಲಸ ಮಾಡುವುದು; ಮತ್ತೆ ಎಲ್ಲಿಲ್ಲದ ಹೆದರಿಕೆ ಹುಟ್ಟಿಸಿ ಬಿಡುವುದು. ಅಂತೂ ರಜೆ ಸಿಗುವುದು ಖಂಡಿತವೇ?'

'ಹೌದು ಅತ್ತಿಗೆ. ಹತ್ತು ದಿನಗಳ ರಜೆ ಹಬ್ಬಕ್ಕೆ ಸರಿಯಾಗಿ ಸಿಗಬಹುದಂತೆ.'

'ಸದ್ಯ ಅಪ್ಪಾವರೂ ಬರೆಪಸಲ್ಲ. ಅನೇ ಪ್ರುಣ್ಯ. ತಗೋ ಈ ಮೂಸುಂಬಿ ಜ್ಯೂಸ್.'

ಅತ್ತಿಗೆಯ ಕೈಯಿಂದ ಗ್ಲಾಸು ತೆಗೆದುಕೊಂಡು ಸುಭದ್ರೆ ಸುರೇಶನನ್ನು ಎಚ್ಚರಿಸಿ 'ಜ್ಯೂಸ್' ಕುಡಿಸುತ್ತಲೇ ಸುಭದ್ರೆ ಅತ್ತಿಗೆಯನ್ನು ಕೇಳಿದಳು

'ಸುರೇಶನನ್ನು ಒಮ್ಮೆ ಶಿವಾಜಿ ಪಾರ್ಕಿನ ತನಕ ಕರೆದುಕೊಂಡು ಹೋಗಲೇ ಅತ್ತಿಗೆ' ಎಂದು.

'ಯಾಕೆ ಸುಭಾ! ಏನಾದರೂ ಹುಚ್ಚುಗಿಚ್ಚು ಹಿಡಿದಿದೆಯೋ ಏನು. ಒಂಭತ್ತು ತಿಂಗಳ ಮಗುವನ್ನು ಯಾರಾದರೂ ತಿರುಗಾಟಕ್ಕೆ ಕರೆದುಕೊಂಡು ಹೋದಾರೇ.'

'ಪೆರಾಂಬುಲೇಟರ್'ನಲ್ಲಿ ಕರೆದುಕೊಂಡು ಹೋಗುತ್ತೇನೆ ಅತ್ತಿಗೆ. ಅವರು ಹಬ್ಬಕ್ಕೆ ಬರುವಾಗ, ಯುವರಾಜನ್ನ ಇಷ್ಟರ ತನಕ ಎಲ್ಲಿಯೂ ಹೊರಗೆ ಕರೆದುಕೊಂಡು ಹೋಗಲೇ ಇಲ್ಲಾಂತ ಕೇಳಿದರೆ ಸಿಟ್ಟುಮಾಡುತ್ತಾರೆ. 'ಏರ್ ಮಾರ್ಶಲ್' ಆಗುವ ಸುರೇಶ ಹೆದರಿ ಕೂತುಕೊಳ್ಳಬಾರದೂಂತ ಅವರ ಅಭಿಪ್ರಾಯ.'

'ಅವನು ತಾನು ತುಂಬಾ ಗೊತ್ತಿದ್ದವನೆಂದು ತಿಳಿದುಕೊಳ್ಳಬಹುದು. ಆದರೆ ಮಕ್ಕಳ ವಿಚಾರ ಅವನಿಗೇನು ಗೊತ್ತು. ಎಲ್ಲಾದರೂ ಶೀತಗೀತ ಆದರೆ, ಅಥವಾ ದೃಷ್ಟಿಗಿಷ್ಟಿ ಬಿದ್ದರೆ . . . . '

'ಒಂದು ದಿನದ ಮಟ್ಟಿಗೆ ಏನತ್ತಿಗೆ! ನಾಳೆ ಒಂದೇ ದಿನ. ಮತ್ತೆ ನಾನು ಕೇಳೋದಿಲ್ಲ. ಬರೇ ಶಿವಾಜಿ ಪಾರ್ಕಿನ ವರೆಗೆ ಹೋಗಿ ಬರೋದು.'

'ನಿನ್ನಿಷ್ಟ ಸುಭಾ. ಬೇಡಾಂತ ಹೇಳಿದರೆ ನೀನು ಕೇಳುತ್ತೀಯಾ?' ಎಂದು ಪ್ರಭಾ ಸುಮ್ಮಗಾದಳು.

ಹಬ್ಬಕ್ಕೆ ಆವರು ಬಂದೇ ಸಿದ್ಧ ಎಂದು ತಿಳಿದು ಸುಭದ್ರೆ ಸ್ವಾಗತದ ಸ್ವಾಗತಕ್ಕೆ ಸನ್ನಾಹ ನಡೆಸಿದಳು. ಈ ಸಂಭ್ರಮದಲ್ಲಿ ಅವರ ಈ ಬಾರಿಯ ಕಾಗದವನ್ನು ಎರಡೇ ಸಲ ಓದಿದ್ದು, ಎಂದಿನಂತೆ ಹದಿನೆರಡು ಸಲವಲ್ಲ ಎಂಬುದು ಆಕೆಗೆ ಮರೆತೇ ಹೋಗಿತ್ತು.

ತಾಯಿ, ಸೋದರತ್ತೆಯರ ಜೊತೆಗೆ 'ಕಮಾಂಡರ್ ಇನ್-ಚೀಫ್' ಆಗಲಿರುವ ಸುರೇಶನ 'ಶಿವಾಜಿ ಪಾರ್ಕ್' ಪ್ರಯಾಣ ಪೆರೇಂಬುಲೇಟರಿನಲ್ಲಿ ಮೂರನೆಯ ದಿನ ನಡೆದಿತ್ತು. ವಿಜಯ ವೈಭವದಿಂದ ಸುರೇಶ ಮೆರಳಿದ್ದ.

ಆದರೂ ಮನೆ ತಲುಪಿದೊಡನೆಯೇ ದೃಷ್ಟಿಯಾಗಿರಬಹುದೆಂದು ಹೆದರಿ–ನಿವಾಳಿಸಿ ತೆಗೆಯದೆ ಪ್ರಭಾಗೆ ಸಮಾಧಾನವಿದ್ದಿಲ್ಲ.

ಮತ್ತೆ ಎರಡೇ ದಿನಗಳಲ್ಲಿ ಸುರೇಶನಿಗೆ ಅವನ ಆಯುಷ್ಯದಲ್ಲಿ ಮೊದಲ ಬಾರಿ ಮೈ ಬಿಸಿಯಾಯಿತು.

ಸುಭದ್ರೆ ಕಂಗೆಟ್ಟಳು.

ಬಂದುದು ಬರೇ ಶೀತ ಜ್ವರ. ಆದರೆ ಸುಭದ್ರೆಯನ್ನು ಧೃತಿಗೆಡಿಸಲು ಅದೇ ಸಾಕಾಗಿತ್ತು. ನಾಲ್ಕಾರು ದಿನಗಳ ತನಕವೂ ಹಿಡಿದ ಜ್ವರ ಬಿಡಲೇ ಇಲ್ಲ.

ಪ್ರಭಾ ಚಡಪಡಿಸುತ್ತಿದಳು. 'ನೋಡು ಸುಭಾ. ಶಿವಾಜಿ ಪಾರ್ಕ್ ಬೇಡವೆಂದೆ. ಈಗ ಅನಂತ ಬರಲಿರುವಾಗ ಮಗುವಿನ ಆರೈಕೆ ನೋಡ ಬೇಕಾಗಿ ಬಂತಲ್ಲ.'

ಸುಭದ್ರೆಗೆ ಉತ್ತರ ಕೊಡುವಾಗ ಕಣ್ಣಲ್ಲಿ ನೀರು ಬಂದಿತ್ತು.

'ಇಲ್ಲ ಅತ್ತಿಗೆ. ಮಗ ತುಂಬಾ ಧೈರ್ಯವಂತನಾಗಬೇಕೆಂದು ಅವರ ಆಸೆ. ಅದಕ್ಕಾಗಿ ಹೊರಗಿನ ಹವೆಯೊಮ್ಮೆ ತಿನ್ನಿಸುವ ಎಂದು ಕರೆದುಕೊಂಡು ಹೋದೆ' ಎಂದಳು.

ಸುಭದ್ರೆ ಅಳುವುದನ್ನು ಕಂಡಾಗ ಪ್ರಭಾನ ಹೃದಯ ಕರಗಿತು.

'ಅಳತೊಡಗಿದೆಯೇನೇ ಹುಚ್ಚು ಹುಡುಗಿ. ಶೀತ ಜ್ವರಕ್ಕೆ ಇಷ್ಟೆಲ್ಲಾ, ಹೆದರುತ್ತಾರೆಯೇ. ಒಂದೆರಡು ದಿನಗಳಲ್ಲಿ ಗುಣವಾದೀತು ಬಿಡು!

ಸುರೇಶನ ಹಾಸಿಗೆಯನ್ನು ಸರಿಪಡಿಸಲೆಂದು ಸುಭದ್ರೆ ಬಾಗಿದಾಗ ಅವನ ತಲೆದಿಂಬಿನಡಿ ಮೊನ್ನೆ ಬಂದ ಪತ್ರ ಹೊರತಲೆ ಸಿಂತಂತೆ ಕಂಡುಬಂತು. ಅದನ್ನು ತೆಗೆದು ಪುನಃ ಓದಿದಳು.

ಆಗಲೇ ಆಕೆ ಅದನ್ನು ಮೂರನೆಯ ಬಾರಿ ಓದಿದುದು.

ಅದರಲ್ಲಿ ಬರೆದ ಶ್ರೀನಗರ ಪ್ರಯಾಣದ ವಿಚಾರ ಓದುವಾಗ ಏಕೋ ಸುಭದ್ರೆಯ ಹೊಟ್ಟೆಯೆಲ್ಲಾ ಕಸಿವಿಸಿಯಾಯಿತು. "ಧಾಳಿಕಾರರ ಹಾವಳಿಯಿಂದ ಕಷ್ಟಪಟ್ಟ ಒಂದು ಕುಟುಂಬದಲ್ಲಿ ಉಳಿದ ಒಂದು ತಾಯಿ ಮತ್ತೊಂದು ಪುಟ್ಟ ಮಗು–ಸಾಧಾರಣ ನಾಲ್ಕಾರು ವರ್ಷಗಳಾಗಬಹುದು–ಅವರನ್ನು ಮಾತನಾಡಿಸುವ ಪ್ರಸಂಗ ಬಂದಿತ್ತು. ಆ ದುಃಖದ ಕತೆಯೆಲ್ಲಾ ಬರೆದರೆ ನೀನು ಅಳುತ್ತಲೇ ಕುಳಿತುಕೊಂಡೀಯೆ ಸುಭಾ . . . ." ದುಃಖದಿಂದ, ಕಳ

ವಳದಿಂದ ಕಾಗದವನ್ನು ತೆಗೆದು ನೋಡಿದ ಮೇಲೆ ಬಿಸಾಡಿದಳು ಸುಭದ್ರೆ. ಹಾಗೆಯೇ ಮಗುವಿನ ಟೆಂಪರೇಚರ್ ನೋಡಲು ಥರ್ಮಾಮೀಟರ್ ಹುಡುಕಿಕೊಂಡು ಒಳ ನಡೆದಳು.

ಮತ್ತೆ ನಾಲ್ಕಾರು ದಿನಗಳ ತನಕ ಮಗುವಿನ ಜ್ವರ ಏರುತ್ತಲೇ ನಡೆದಿತ್ತು. ಗಂಡನ ಸ್ವಾಗತದ ಸಂಭ್ರಮವೆಲ್ಲ ಮಾಯವಾಗಿ ಸುಭದ್ರೆ ಮಗುವಿನ ಆರೈಕೆಯ ಕಡೆ ನೋಡತೊಡಗಿದಳು. ಎಳೆಂಟೇ ದಿನಗಳಲ್ಲಿ ಆಕೆಯ ಕಣ್ಣುಗಳು ಗುಳಿ ಬಿದ್ದಿದ್ದವು.

ಗಂಡನಿಗೆ ಬರೆದ ಉತ್ತರದಲ್ಲಿ ಸುರೇಶನ ಅಸ್ವಸ್ಥತೆಯ ವಿಚಾರ ಬರೆದಿರಲಿಲ್ಲ. ಸಾಧ್ಯವಿದ್ದಷ್ಟು ಬೇಗನೆ ಬನ್ನಿ ಎಂದು ಮಾತ್ರ ಬರೆದಿದ್ದಳು ಸುರೇಶನಿಗೆ ಜ್ವರ ಆರಂಭವಾದ ಮೇಲೆ ಬರೆದ ಕಾಗದವದಾದ ಕಾರಣ, ಅನಂತ ಅವರ ವಸಿಯಲ್ಲಿ ಬದಲಾವಣೆಯನ್ನು ಕಂಡುಕೊಳ್ಳಬಹುದಿತ್ತು.

ಹತ್ತು ದಿನಗಳ ನಂತರ ಜ್ವರ ಇಳಿಯಲಾರಂಭಿಸಿತು. ಸುಭದ್ರೆಯ ಮೊಗ ಕೊಂಚ ಅರಳಿತಾದರೂ ಗಂಡ ಬರುವ ದಿನ ಸಮೀಪಿಸಿತೆನ್ನುವಾಗ ಸುರೇಶ ಇಳಿದು ಹೋಗಿರುವನಲ್ಲಾ, ಎಂಬ ಚಿಂತೆ ಕಾಡುತ್ತಿತ್ತು. ತುಂಬಿದ ದೇಹದ, ತುಂಬಿದ ಉತ್ಸಾಹದ ಸುರೇಶನನ್ನು ಕೈಯಲ್ಲಿ ಹಿಡಿದು ಗಂಡನನ್ನು ಸ್ವಾಗತಿಸುವ ಸಂಭ್ರಮ ತಪ್ಪಿಹೋಯಿತಲ್ಲಾ ಎಂದು ಸುಭದ್ರೆಗೆ ಉಂಟಾದ ಬೇಸರ ಅಷ್ಟಿಷ್ಟಲ್ಲ.

ಮತ್ತೆ ಅನಂತನಿಂದ ಪತ್ರವೇ ಇರಲಿಲ್ಲ. ದಾರಿ ಕಾಯುತ್ತಾ ಹದಿನೈದು ದಿನಗಳನ್ನು ಕಳೆದಿದ್ದಳು ಸುಭದ್ರೆ. ಅಂದು ಮುಂಜಾನೆ ಸುರೇಶನ ಜ್ವರ ಎಲ್ಲಾ ಬಿಟ್ಟಿತ್ತು. ಆ ಕಾರಣ ಕೊಂಚ ಗೆಲುವಾಗಿಯೇ ಇದ್ದಳು.

ಸಂಜೆಗೆ ಪುನಃ ಎಲ್ಲಾದರೂ ಜ್ವರ ಬಂದಿದೆಯೋ ಎಂದು ಥರ್ಮಾಮೀಟರ್ ತಂದು ಪರೀಕ್ಷಿಸಿದಳು. ಹದಿನೈದು ದಿನಗಳ ಆರೈಕೆ ಮಾಡಿ ಕೃಶಳಾಗಿದ್ದ ಸುಭದ್ರೆಯನ್ನು ಕಂಡಾಗ ಬಳಿಯಲ್ಲಿದ್ದ ಪ್ರಭಾಳ ಹೃದಯ ತುಂಬಿ ಬಂದಿತ್ತು.

ಕಿಟಕಿಯ ಬಳಿ ಹೋಗಿ ಥರ್ಮಾಮೀಟರ್ ನೋಡುತ್ತಿದ್ದ ಸುಭದ್ರೆಯನ್ನು ಪ್ರಭಾ ಪ್ರಶ್ನಿಸಿದಳು.

'ಜ್ವರ ಉಂಟೇ ಸುಭಾ . . .' ಎಂದು.

'ಇಲ್ಲ ಅತ್ತಿಗೆ. ಬಿಟ್ಟಿತೆಂದು ತೋರುತ್ತದೆ! ಎಂದು 'ಬೇಸಿನ್' ಕಡೆ

ಥರ್ಮಾಮೀಟರ್ ತೊಳೆಯಲು ಮುಂದುವರಿಯುವಷ್ಟರಲ್ಲಿ ಹೊರಬಾಗಿಲಿನ ಬೆಲ್ ಬಾರಿಸಿತು.

'ಪೋಸ್ಟ್‌ಮ್ಯಾನ್ ಬಂದಾಂತ ಕಾಣುತ್ತದೆ.' ಎಂದು ಪ್ರಭಾ ಬಾಗಿಲಿನತ್ತ ನಡೆದಳು.

ಥರ್ಮಾಮೀಟರನ್ನು ತೊಳೆಯುತ್ತಲೇ ಕುತೂಹಲದಿಂದ ಅತ್ತಿಗೆಯನ್ನನುಸರಿಸಿದಳು, ಸುಭದ್ರೆ.

ಬಾಗಿಲು ತೆರದಾಗ ಜವಾನ ನಿಂತಿದ್ದ. ಕೈಯ್ಯಲ್ಲೊಂದು ತಂತಿಯಿತ್ತು.

'ತಂತಿ ಬಂದಿದೆಯಾ ಅತ್ತಿಗೇ' ಎಂದು ಸುಭದ್ರೆ ಮುಂದುವರಿದು ಅದನ್ನು ಪಡೆದುಕೊಂಡಳು.

'ಯಾವಾಗ ಬರುತ್ತಾನಂತೆ ಸುಭಾ. ಹೊರಟಾಗಿದೆಯೇ?' ಎಂದಳು ಪ್ರಭಾ ಕುತೂಹಲವನ್ನು ತಡೆಯಲಾಗದೆ.

ಒಂದು ಕೈಯಲ್ಲಿ ಥರ್ಮಾಮೀಟರ್ ಹಿಡಿದುಕೊಂಡೇ ತಂತಿಯನ್ನು ಸುಭದ್ರೆ ಒಡೆದು ಓದಿದಳು.

ಮುಖ ಬಿಳುಪೇರಿತು. ಥರ್ಮಾಮೀಟರ್ ಕೆಳಬಿದ್ದು ಪುಡಿಪುಡಿಯಾಯಿತು. ಗೋಡೆಗೆ ಸಾವರಿಸಿ ನಿಂತಿದ್ದಂತೆಯೇ ಸುಭದ್ರೆ ಕುಸಿದುಬಿದ್ದಳು.

'ಏನಾಯಿತೇ ಪ್ರಭಾ . . . ಏನು ಬರೆದಿದೆಯೇ ಪ್ರಭಾ . . . ಹೀಗೇಕಾಯಿತೇ' ಎಂದು ಉದ್ವೇಗದಿಂದ ಎದೆ ಹೊಡೆದುಕೊಳ್ಳುತ್ತಿದಂತೆಯೇ ಪ್ರಭಾ ಸುಭದ್ರೆಯ ಬಳಿ ಬಗ್ಗಿ ಆಕೆಯ ಕೈಯಿಂದ ತಂತಿಯನ್ನು ಕಸಿದುಕೊಂಡು, ಅಳುತ್ತಲೇ ಅದನ್ನು ಬಿಡಿಸಿದಳು.

ಆಗ ತಾನೇ ಆಫೀಸಿನಿಂದ ಮರಳಿದ ಪ್ರಭಾನ ಗಂಡ ಸುಭದ್ರೆ ಬಿದ್ದುದನ್ನು ಕಂಡು ಧಾವಿಸಿ ಒಳಬಂದರು.

ಪ್ರಭಾ ಬಿಡಿಸಿ ಓದಿದ ತಂತಿಯಲ್ಲಿ ಹೀಗೆ ಬರೆದಿತ್ತು.

'ಫ್ಲೈಟ್ ಲೆಫ್ಟಿನೆಂಟ್ ಅನಂತ ರಾವ್, ಆರ್. ಐ. ಎ. ಎಫ್. ಯುದ್ಧರಂಗದಲ್ಲಿ ಮೃತರಾದರೆಂದು ತಿಳಿಸಲು ರಕ್ಷಣಾ ಶಾಖೆಗೆ ವಿಷಾದವಾಗುತ್ತದೆ!

ನಲ್ಮೆಯಿಂದ ಬೆಳಗಬೇಕಿದ್ದ ದೀವಳಿಗೆಯ ಆರತಿ ಅನಂತನಿಗೆ 'ಕಾಲಚಕ್ರದ ಗತಿ'ಯಲ್ಲಿ, ಇನ್ನೊಂದೆಡೆಗಾದರೂ ಸಿಕ್ಕಿತೆ?



# ಕೊನೆಯೆಂತು?

ಮ. ವಿ. ನಾಯಕ

ಅಂದು ಕೂಡಾ ಬಾಬಣ್ಣನೇ ಸೋತವನು!

ಅಲ್ಲ, ರವಿಯೊಡನೆ ಸ್ಪರ್ಧೆಗೆ ನಿಲ್ಲುವ ಸಾಹಸವೇನು ಸಾಮಾನ್ಯವೆ? ಅರುಣೋದಯದ ಮುಂಚಿತವೇ ತಾನು ಎದ್ದುಕೊಂಡು, ಪ್ರಾತರ್ವಿಧಿ ಕರ್ಮಗಳನ್ನು ಮುಗಿಸಿ, ಹೊಲಕ್ಕೆ ಬಂದು ದಿನವಿಡೀ ದುಡಿಮೆಗಾಗಿ ಮೈ ಮುರಿದು, ಸೂರ್ಯ ಮುಳುಗುವುದರೊಳಗಾಗಿ ಮನೆ ಸೇರಬೇಕೆಂಬ ಹಂಬಲದ ಹಟ ಬಾಬಣ್ಣನದು! ಆದರೆ ಒಂದು ದಿನವಾದರೂ ಅವನು ತನ್ನ ಹಟ ಸಾಧಿಸಿದವನಲ್ಲ. ಅದೇನು ಸುಲಭವೆ? ಹೊಲಗೆಲಸ ಒಂದು ದಿನದ ಕೆಲಸವೆ? ಮಾಡಿದಷ್ಟೂ ಮುಗಿಯದು. ಒಬ್ಬನೇ ಏನು ತಾನೆ ಮಾಡಿಯಾನು? ಆದರೂ ಮನುಷ್ಯ ಸ್ವಭಾವ. ಪ್ರಯತ್ನಪಟ್ಟರಾಗದೆ? . . . . ಎಂಬೊಂದು ಆಸೆ.

. . . . ಒಂದೆಡೆ ಹೊತ್ತಾಯಿತು. ಮನೆಗೆ ತೆರಳಬೇಕೆಂಬ ಆತುರ ಇನ್ನೊಂದೆಡೆ ಕೆಲಸ ಪೂರೈಸಿಯೇ ತೀರಬೇಕೆಂಬ ಚಪಲ. ಇವುಗಳ ತಿಕ್ಕಾಟದಲ್ಲಿ ಅವನ ಮನಸ್ಸು ತಳಮಳಗೊಂಡಿತು. ಲಗುಲಗುವಾಗಿ ತನ್ನ ಕೆಲಸ ಪೂರ್ತಿಗೊಳಿಸುವ ಉತ್ಸಾಹ ಕ್ಷಯಿಸಿತು; ಉದ್ವೇಗ ಬಲಿಸಿತು.

ಆದರೆ, ತನ್ನೊಡನೆ ಮಾನವನ ಹೋರಾಟವೆಂದೂ ಸಾಗದೆಂದು ಅಹಂಕಾರದ ನಗೆಸೂಸಿದ ಸೂರ್ಯ ಫಕ್ಕನೆ ಮರೆಯಾದ!

ಬಾಬಣ್ಣ ನೋಡುತ್ತಾನೆ, ಸಂಜೆ ಸರಿದಿದೆ, ರಾತ್ರಿ ಸಮೀಪಿಸಿದೆ. ಆದರೂ ತಾನಿನ್ನೂ ಹೊಲದಲ್ಲೇ . . . . !

ದುಡಿದೂ ದುಡಿದೂ ಬೇಸತ್ತ ಅವನಿಗೆ ಉತ್ಸಾಹ ಭಂಗವಾಯಿತು. ಒಂದು ತೆರನ ಆಲಸ್ಯವು ಆವರಿಸಿತು. 'ಯಾವಾಗಲೂ ಇದ್ದದ್ದೇ!' ಎಂದು ನಿಟ್ಟುಸಿರಗರೆದು, ಅಲ್ಲೇ ಬಾವಿನೀರನ್ನು ಹಾಯಿಸಿ ಕೈಕಾಲುಗಳನ್ನು ತೊಳೆ

ಕೊಂಡ. ತುಸು ಶಾಂತನಾಯಿತು, ದೇಹದ ದಣಿವು. ಮತ್ತೆ ಅಲ್ಲೇ ಸಮೀಪದ ದಿಣ್ಣೆಯ ಮೇಲೆ ಆರಾಮ ಕುಳಿತುಕೊಂಡ.

ವಿಶ್ರಾಂತಿ ಬಯಸಿ ಸುಮ್ಮಗೆ ಅವನು ಒರಗಿಕೊಂಡಿದ್ದರೂ ಶ್ರಮಜೀವಿಗೆ ವಿಶ್ರಾಂತಿಯೆಂತರದು? ದೇಹಕ್ಕೆ ಕೆಲಸವಿಲ್ಲದಿದ್ದರೂ ಮನಸ್ಸು ಹಗಲೂ ರಾತ್ರಿ ದುಡಿಯುತ್ತಲೇ ಇದೆ. ಅಂತೆಯೇ ವಿಚಾರಮಗ್ನನಾಗಿ ಏನೋ ಯೋಚಿಸುತ್ತಲಿದ್ದ.

ಎದುರುಗಡೆ ಉದ್ದಕ್ಕೂ ಹೊಲಗಳು ಚಾಚಿಕೊಂಡಿವೆ. ಬೆಳೆ ಹುಲುಸಾಗಿ ಬೆಳೆದಿದೆ; ಫಲವತ್ತಾದ, ಸಮೃದ್ಧಿಯಾದ ನೆಲ ನೋಡಿ ಬಾಬಣ್ಣನ ಹರ್ಷ ಇಷ್ಟಿಷ್ಟಲ್ಲ! ಒಂದಿಷ್ಟು ಗಾಳಿ ಬೀಸಿ ಹಸುರು, ಹುಲ್ಲು ಮೇಲೆ ಹಾಯುತೆಂದರೆ ಆ ನೋಟ ನಿಚ್ಚಳ ಹಿಂಸ ಪ್ರವಾಹದಂತೆ! ಇವೆಲ್ಲ ಹೊಲಗಳು ತನ್ನವಾಗಿದ್ದರೆ....? ಎಂದೊಮ್ಮೆ ಕನವರಿಸಿದ. ಆದರೆ ತನ್ನದಲ್ಲವೆಂದು ಏಕೆ ತಿಳಿಯಲಿ? ಎಂದೂ ಹೇಳಿಕೊಳ್ಳುವ. ಹಸಿಯ ಭೂಮಿಯಾದರೂ ಕಷ್ಟಪಟ್ಟು ದುಡಿದು ಫಲಗೊಳಿಸಿ ಕೊಡುವವ ತಾನಲ್ಲವೆ? .... ತನಗೂ ಅದರಿಂದ ಜೀವನ ಸಾಗಬೇಕು. ಅವುಗಳಷ್ಟರಲ್ಲೇ ತೃಪ್ತಿ. ಹೆಚ್ಚಿನ ಆಸೆಯೇಕೆ? ಇದ್ದುದರಲ್ಲಿ ಸಂತುಷ್ಟಿಯಿರಬೇಕು. ಆದರೆ .... ಇದ್ದುದು ಸಾಕಾಗದಿದ್ದರೆ? ಕಾಲ ಬದಲಿದೆ. ಆದಾಯ ಕಡಿಮೆ, ಖರ್ಚು ಹೆಚ್ಚಿದ ಮೇಲೆ ... ? ಅದಕ್ಕಾಗಿ ಸಾಲಮಾಡಬೇಕಾಯಿತು, ಮಾಡಿದ. ಮತ್ತಾರೊಡನೆಯೂ ಸಾಲ ಬೇಡಲಿಲ್ಲ. ಅವನ ಭೂಮಿಯೊಡೆಯನಲ್ಲೇ ಸಾಲ ತೆತ್ತ. ಆ ಸಾಲದ ಪಾವತಿ ಈ ವರ್ಷ ಬಡ್ಡಿ ಸಮೇತ ತೆರಬೇಕು. ಅದಕ್ಕಾಗಿ ಅತಿ ಕಷ್ಟಪಟ್ಟು ಬೆಳೆ ಬೆಳೆಸಿ ಹೆಚ್ಚಿನ ಫಲಾಪೇಕ್ಷೆಯಲ್ಲಿದ್ದ .... ಎಣಿಸಿದಂತೆ, ಮಳೆಗಾಳಿ ನೈಸರ್ಗಿಕ ವಾತಾವರಣವೂ ಅನುಕೂಲವಾಗಿ ಪರಿಣಮಿಸಿತು. ಅದರ ಫಲ ಹೊಲ ತುಂಬ ಬೆಳೆ!

ನೋಡುತ್ತ ನೋಡುತ್ತ ಬಾಬಣ್ಣನ ಎದೆಯಲ್ಲಿ ಹರ್ಷ ಉಕ್ಕಿಬಂತು; ಕಣ್ಣುಗಳಲ್ಲಿ ಹನಿದುಂಬಿದುವು.

ಆದರೆ ಆ ಸಂತೋಷದ ಮರೆಯಲ್ಲಿ ಒಂದು ಭೀತಿಯೂ ಹುದುಗಿತ್ತು. ಅದಕ್ಕೆ ಕಾರಣವೂ ಇದೆ. ಸುತ್ತಮುತ್ತಲಿನ ಹಳ್ಳಿಪಳ್ಳಿಗಳಲ್ಲಿ ರಜಕಾರರು ಮಾಡಿದ ಹಾವಳಿ ದಬ್ಬಾಳಿಕೆಗಳು ಸಾಕಷ್ಟು ಕೇಳಿ ಬರುತಿದ್ದುವು. ಎಲ್ಲಿ ಬಂದು ತನ್ನ ಹೊಲವನ್ನು ನಾಶಮಾಡುವರೋ? ಎಂಬ ಅಂಜಿಕೆ ಸಹಜವಾಗಿ

ಅವನಲ್ಲಿ ಮೂಡಿತ್ತು. ಒಂದು ವೇಳೆ ಅವರು ಬಂದೇ ಬಿಟ್ಟರೆಂದರೆ . . . ಅವನ ಸರ್ವನಾಶವೇ . . . . ಸಾಲತೀರಿಸುವುದಂತೂ ಇರಲಿ, ಮುಂದೆ ಜೀವಿಸುವುದೇ ಕಷ್ಟವಾಗುವುದು. . . . ದೇವರೇ ತನ್ನನ್ನು ಕಾಪಾಡಬೇಕೆಂದು ಮೊರೆಯಿಟ್ಟಿದ್ದ.

ಸದ್ಯ ಆ ಭೀತಿ ಹೆಚ್ಚು ಅವನನ್ನು ಬಾಧಿಸಲಿಲ್ಲ. ಅದಕ್ಕಿಂತಲೂ ಮೇಲಾದ ಸಮಸ್ಯೆ ತತ್ಕಾಲಕ್ಕೆ ಅವನಿಗೆ ಬಿಡಿಸಲಾಗಲಿಲ್ಲ. ಅದೇ ಅವನ ಹೆಂಡತಿಯ ಕಾಯಿಲೆ. ಹದಿನೈದು ದಿನಗಳಿಂದಲೂ ಎಡೆಬಿಡದೆ ಜ್ವರ ಅವಳನ್ನಾವರಿಸಿತ್ತು. ತನಗರಿತ ಬೇರು ಮೂಲಿಕೆಗಳ ಮದ್ದು ಮಾಡಿದ. ಯಾವುದೂ ಫಲಕಾರಿಯಾಗಲಿಲ್ಲ. ಊರ ವೈದ್ಯರನ್ನು ಕರೆತರಿಸಿಯೂ ಆಯಿತು. ರೋಗ ವಾಸಿಯಾಗುವ ಚಿಹ್ನೆಯಿಲ್ಲ. ಏನು ಮಾಡುವುದೆಂಬ ಯೋಚನೆಯಿಂದ ತುಂಬ ನೊಂದುಕೊಂಡ. ಇದಾವುದೂ ಬೇಡ, ಆರಾಮ ಇರೋಣವೆಂದು ಆತ ಸುಮ್ಮಗೆ ಕುಳಿತುಕೊಂಡಿದ್ದ. ಈ ತರದ ಸಮಸ್ಯಾ ವಿಚಾರಗಳು ಅವನನ್ನು ಕಾಡತೊಡಗಿದುವು. ತುಂಬಾ ಕತ್ತಲಾಗಿತ್ತು. ಬೆಳದಿಂಗಳಿಂದ ಅಷ್ಟೊಂದು ರಾತ್ರಿಯಾದೀತೆಂಬ ಭಾವನೆ ಅವನಿಗೆ ಬರಲಿಲ್ಲ. ಅವನನ್ನಾ ತೋಟದಲ್ಲೇ ಭಾವನಾಪರವಶನಾಗಿ ಉಳಿದ.

ಯಾರೋ ಹಿಂದಿನಿಂದ 'ಬಾಬಣ್ಣಾ' ಎಂದು ಕೂಗಿದರು. ಬಾಬಣ್ಣನಿಗಾಗಲೇ ಎಚ್ಚರ. ಹಿಂತಿರುಗುತ್ತಾನೆ, ನೆರೆಮನೆಯಾಳು.

"ಏನು ಬಾಬಣ್ಣಾ, ಇನ್ನೂ ಮನೆಗೆ ಹೊರಡುವ ಯೋಚನೆಯಿಲ್ಲ. ಏನು ಯೋಚಿಸುತ್ತಿದ್ದ? ನೀನು ಬಾರದ್ದರಿಂದ ನಾನೇ ನಿನ್ನನ್ನು ಹುಡುಕಲು ಬರಬೇಕಾಯಿತು." ತುಸು ಅಧಿಕಾರವಾಣಿಯಲ್ಲೇ ಆತ ನುಡಿದ.

ಬಾಬಣ್ಣ ನಕ್ಕ ದುಃಖದ ನಗೆಯದು. "ಮತ್ತೇನು ಮಾಡಲಿ? ಮನೆಯಲ್ಲಿ ಕೂತರೂ ಅಷ್ಟೇ, ಇಲ್ಲಿ ಇದ್ದರೂ ಅಷ್ಟೆ. ಅವಳಿಗಿನ್ನೂ ಗುಣವಾಗಿಲ್ಲ. ಏನು ಮಾಡೋದು? ಹೇಳಿ, ನರಸಣ್ಣನವರೆ."

"ಅದಕಿಷ್ಟು ಮನಸ್ಸಿಗೆ ಹಚ್ಚಿಕೊಂಡರೆ ಹೇಗಾದೀತು? ಬಾಬಣ್ಣಾ. ಸುಮ್ಮನಿರುವುದಕ್ಕಿಂತ, ಏನಾದರೂ ಪ್ರಯತ್ನ ಮಾಡಬೇಕು. ಈಗ ಬಾ, ಹೋಗೋಣ, ನಿನ್ನವ್ವ ದಾರಿ ಕಾಯುತ್ತಿದ್ದಾಳೆ. ಏನು ಹುಚ್ಚುತನ ನಿನ್ನದು? ಅವರನ್ನೆಲ್ಲ ಗಾಬರಿಗೊಳಿಸಿ ನೀನಿಲ್ಲಿದ್ದೀಯಾ?"

ಇಬ್ಬರೂ ಮನೆಕಡೆ ಹೊರಟರು. ಬಾಬಣ್ಣನ ಹಿತಚಿಂತಕ ನರಸಣ್ಣ.

ಅವನಿಗೂ ಬಾಬಣ್ಣನಿಗೂ ಅತ್ಯಂತ ಸ್ನೇಹ. ಆದರೆ ಅವನ ಸ್ಥಿತಿ ಬಾಬಣ್ಣನಂತಹದೇ. ಇವನಿಗಾದರೂ ಹೊಲಗಳಿವೆ. ಆತ ದಿನಕೂಲಿ ಮಾಡಿ ತಿನ್ನುವವ. ಇಂಥಹನಿಂದ ಬಾಬಣ್ಣ ಏನು ಸಹಾಯ ತಾನೇ ಪಡೆಯಾನು?

ದಾರಿಯುದ್ದಕ್ಕೂ ಅವರಿಬ್ಬರ ಮಾತು ಸಾಗಿದ್ದುದರಿಂದ, ಮನೆ ಬಂದುದು ತಿಳಿಯಲಿಲ್ಲ. ತಾಯಿ ಬಾಗಿಲ ಬಳಿ ನಿಂತಿದ್ದಳು. "ಯಾಕೆ ತಡ ಮಾಡಿದೆಯಪ್ಪಾ? ನಾ ಗಾಬರಿಯಾದೆ ನೋಡು. ಹೋಗಿ ಡಾಕ್ಟರನನ್ನಾದರೂ ಕರೆದುಕೊಂಡು ಬಾ. ಹೀಗೇ ಬಿಟ್ಟರೆ, ಅವಳೇನೂ ಗುಣವಾಗೋದಿಲ್ಲ . . . ."

ಬಾಬಣ್ಣ ಒಳಕ್ಕೆ ಹೋದ. ಅವಳು ಅಲ್ಲೇ ಮಲಗಿದ್ದಳು. ಹಣೆ ಮುಟ್ಟಿ ನೋಡುತ್ತಾನೆ, ಕೆಂಡದಂತೆ ಕಾದಿದೆ! ಜ್ವರದ ಭರದಲ್ಲಿ ಅವಳೇನೋ 'ಹುಚ್ಚು ಹುಚ್ಚು' ಅನ್ನುತ್ತಿದ್ದಳು.

ಆ ನೋಟ ಅವನಿಂದ ತಡೆಯಲಾಗಲಿಲ್ಲ! ತಿಳಿದೂ ತಿಳಿದೂ ಡಾಕ್ಟರರ ನೆರವು ಪಡೆಯದಿದ್ದರೆ, ತಾನು ದೊಡ್ಡ ಅಪರಾಧವೆಸಗಿದಂತಾಗುವುದೆಂದು ಮನಸ್ಸಿನಲ್ಲಿ ಗಟ್ಟಿಮಾಡಿದ ಡಾಕ್ಟರರನ್ನು ಕರೆತರಲೇಬೇಕೆಂದು ಯೋಚನೆಗೊಳಗಾದ. ಆಗ ಹೊರಗಿದ್ದ ನರಸಣ್ಣ, 'ನುಮ್ಮನೆ ಏನು ಯೋಚನೆ ಮಾಡುತ್ತಿ? ಬಾ, ಹೋಗಿ ಬರೋಣ. ನಾನೂ ಬರುತ್ತೇನೆ" ಎಂದ.

"ಹೌದು ಮಗೂ, ಬೇಗ ಅವರೊಟ್ಟಿಗೆ ಹೋಗಿ ಬಾ. ಮತ್ತೆಲ್ಲ ಯೋಚನೆ."

"ಕಡೆಗೆ ಬಾಬಣ್ಣ ಒಂದೇ ಮನಸ್ಸು ಮಾಡಿಕೊಂಡು ಡಾಕ್ಟರರನ್ನು ಕರೆತರೋದಕ್ಕೆ ಅದೇ ರಾತ್ರಿ ನರಸಣ್ಣ ನೊಡಗೂಡಿ ಹೊರಹೊರಟನು . . . . .

ರಾತ್ರಿ ಹತ್ತು ಗಂಟೆಯಾಗಿರಬಹುದು. ದವಾಖಾನೆಯನ್ನು ಮುಚ್ಚಿ ಡಾಕ್ಟರರು ಹಿಂದುಗಡೆಯ ತಮ್ಮ ಮನೆಗೆ ತೆರಳಿದ್ದರು. ಬಾಬಣ್ಣ ನರಸಣ್ಣನೊಂದಿಗೆ ನೇರಾಗಿ ಮನೆಗೆ ಹೋದ. ಹೊರ ಚಾವಡಿಯಲ್ಲೇ ಡಾಕ್ಟರರು ಕಾಣಿಸಿಕೊಂಡರು.

"ಯಾಕೋ ಬಂದಿ, ಇಷ್ಟು ಹೊತ್ತಿನಲ್ಲಿ!" ಎಂದು ಡಾಕ್ಟರರೇ ಬಾಬಣ್ಣನನ್ನು ಗುರುತಿಸಿ ಪ್ರಶ್ನಿಸಿದರು.

ಡಾಕ್ಟರರಿಗೆ ಅವನವು ನೋಡಿ ಪರಿಚಯ. ಜಮೀನುದಾರನಲ್ಲಿ ಪದೇ ಪದೇ ಅವರು ಬರುವುದು ರೂಢಿಯಾಗಿತ್ತು. ಆಗ ಬಾಬಣ್ಣ ಅವರಲ್ಲಿರುತಿದ್ದ.

ಅಲ್ಲದೆ ಜವಾನನುದಾರ ಅವನ ಹೆಸರನ್ನು ಹೇಳುತ್ತಾ ಅವನು ನಂಬಿಗಸ್ಥ ಎಂದೆಲ್ಲ ಗುಣಪ್ರಶಂಸೆ ಮಾಡುತಿದ್ದುದನ್ನೂ ಕೇಳಿದ್ದನು.

ಬಾಬಣ್ಣ ಡಾಕ್ಟರರಿಗೆ ಬಗ್ಗಿ ನಮಸ್ಕರಿಸಿ, ತನ್ನ ಪತ್ನಿಯ ಕಾಯಿಲೆಯ ಕುರಿತು ಹೇಳಿದ. ಅಲ್ಲದೆ ತನ್ನ ಮನೆಗೆ ಬಂದು ಒಮ್ಮೆ ಅವಳನ್ನು ನೋಡಿ ಪರೀಕ್ಷಿಸಬೇಕೆಂದು ಬೇಡಿಕೊಂಡ. ಅವನ ಆ ಅಳು ಮೋರೆಯನ್ನು ಕಂಡು ಡಾಕ್ಟರರಿಗೆ ಕನಿಕರ ಹುಟ್ಟಿತೋ, ಏನೋ, ಅವನ ಜತೆಯಲ್ಲಿ ಬರಲೊಪ್ಪಿದರು.

ಮಗನು ಡಾಕ್ಟರರನ್ನು ಮನೆಗೆ ಕರೆದುಕೊಂಡು ಬಂದುದನ್ನು ಕಂಡು, ಬಾಬಣ್ಣನ ತಾಯಿಯ ಮುಖವೊಮ್ಮೆ ಅರಳಿತು. ಡಾಕ್ಟರರು ರೋಗಿಯನ್ನು ಪರೀಕ್ಷಿಸಿದರು. "ಜ್ವರವು ವಿಷಮಕ್ಕೇರಿದೆ. ಹತ್ತಾರು ಸೂಜಿ ಮದ್ದುಗಳ ನ್ನಾದರೂ ಕೊಡಬೇಕು" ಎನ್ನುತ್ತಾ ತಮ್ಮ ಕಿಸೆಯಿಂದ ಕಾಗ್ದವನ್ನು ತೆಗೆದು, ಮದ್ದಿನ ಹೆಸರನ್ನು ಬರೆದು ಬಾಬಣ್ಣನ ಕೈಗಿತ್ತರು.

"ಹತ್ತು ಸೂಜಿ ಮದ್ದುಗಳನ್ನೀಯಬೇಕೆ? ಎಷ್ಟು ಹಣ ತಗಲಬಹುದು?" ಎಂದು ದಿಗಿಲುಗೊಂಡ ಬಾಬಣ್ಣ ಕೇಳಿದ.

"ಅಷ್ಟನ್ನೂ ಕೊಡಬೇಕಾಗುತ್ತದೆ. ಅವಳು ಬಸಿರಿಯೆಂಬುದು ನಿನಗೆ ಗೊತ್ತಿದೆ. ಅವಳು ಹುಷಾರಾಗಿ ಮಗುವನ್ನು ಹೆರಬೇಡವೆ? ಇಂಥಹ ಸಮಯ ದಲ್ಲಿ ನೀನು ಹಣ ವೆಚ್ಚಮಾಡಬೇಕೆಂದು ಸುಮ್ಮಗಿದ್ದರೆ ಹೇಗೆ?"

ಬಾಬಣ್ಣ ಚಿಂತೆಗೊಳಗಾದ. ಮತ್ತೇನು ಹೇಳಿಯಾನು? 'ಹೂಂ' ಗುಟ್ಟಿದ.

"ನಾಳೆ ಮನೆಗೆ ಸೀಸೆಯನ್ನು ಹಿಡಿದುಕೊಂಡು ಬಾ, ಮದ್ದನ್ನು ಕೊಡು ತ್ತೇನೆ. ಬರುವಾಗ್ಯೆ ನಾನು ಆ ಚೀಟಿಯಲ್ಲಿ ಬರೆದ ಮದ್ದನ್ನು ತರಲು ಮರೆಯ ಬೇಡಾ. ಒಂಬ್ಯೆನತ್ತು ರೂಪಾಯಿಗಳ ಖರ್ಚು ತಗಲಬಹುದು. ಅಷ್ಟೆ!" ಎನ್ನುತ್ತಾ ಡಾಕ್ಟರರು ತಮ್ಮ ಮನೆಗೆ ಹೋದರು. ಸರಸಣ್ಣ ತಾನು ಬರುತ್ತೇ ನೆಂದು ಹೋದ. ಬಾಬಣ್ಣನ ತಲೆಯಲ್ಲಿ ಈಗ ಹಣದ ಪ್ರಶ್ನೆ ತಾಂಡವವಾಡುತಿತ್ತು.

ಕಾಯಿಲೆ ಗುಣವಾಗಬೇಕಾದರೆ ಹಣಬೇಕು. ಹಣವೆಲ್ಲಿಂದ ತಂದಾನು?

ಈ ಚಿಂತೆಯಿಂದ ಸರಿಯಾಗಿ ಊಟ ಕೂಡಾ ಮಾಡಲಿಲ್ಲ. ಹಾಗೆಯೇ ಹಾಸಿಗೆಯನ್ನು ಹೊರಳಿಸಿ, ಅದರ ಮೇಲೆ ಹೊರಳಾಡಿಕೊಂಡ. ಬಹಳ ದಣಿ ದಿದ್ದರಿಂದ ಬೇಗನೇ ನಿದ್ದೆ ಹತ್ತಿತು.

* * * * * *

ಮರುದಿನ ಬೆಳಿಗ್ಗೆ ಬಾಬಣ್ಣ ಜಮೀನುದಾರನ ಮನೆಗೆ ಹೊರಟ. ಅಲ್ಲಿಂದ ಪೇಟೆಗೆ ಬರಲು ಸುಮಾರು ನಾಲ್ಕೈದು ಮೈಲುಗಳಾದರೂ ದೂರ ವಿತ್ತು. ಕಾಲ್ನಡೆಯೇ ಅಭ್ಯಾಸವಾಗಿದ್ದ ಬಾಬಣ್ಣನಿಗೆ ಅದೇನೂ ವಿಶೇಷವಲ್ಲ. ಸೂರ್ಯೋದಯಕ್ಕೆ ಮುಂಚೆಯೇ ಎದ್ದು ಹೊರಟವ, ಒಂದು ತಾಸಿನ ಮೇಲೆ ಜಮೀನುದಾರರ ಮನೆಯಂಗಳಕ್ಕೆ ಮುಟ್ಟಿದ. ಆಗ ಜಮೀನುದಾರರು ಎದ್ದಿದ್ದಾರಷ್ಟೆ . . . .

ಇಷ್ಟೊಂದು ಬೆಳಿಗ್ಗೆ ಬಾಬಣ್ಣ ತನ್ನೆಡೆಗೆ ಬಂದುದು ಜಮೀನುದಾರರಿಗೆ ತುಸು ಭೀತಿಯನ್ನುಂಟುಮಾಡಿತು. ಎಲ್ಲಿ ರಜಕಾರರು ತೋಟವನ್ನು ಸುಟ್ಟು ಬೂದಿ ಮಾಡಿದರೋ ಎಂಬ ಅಂಜಿಕೆ. ಅದಕ್ಕಾಗಿ ಅವರು "ಏನು ಬಾಬಣ್ಣ. ತೋಟದ ಕೆಲಸ ಸಾಗುತಿದೆಯಷ್ಟೆ . . . ." ಎಂದರು.

ಬಾಬಣ್ಣ "ಹೂಂ" ಎಂದಿಷ್ಟೇ ಉತ್ತರಕೊಟ್ಟ. ಮತ್ತೆ ಜಮೀನುದಾರರಿಗೆ ಧೈರ್ಯಬಂತು. ಅವರೆಂದರು.

"ಚೆನ್ನಾಯ್ತು, ನೀನು ಬಂದದ್ದು. ನಾನೇ ನಿನಗೆ ಕರೆ ಕಳುಹಿಸಬೇಕೆಂದಿದ್ದೆ ಇರಲಿ. ಕೂತುಕೋ ಅಲ್ಲಿ." ನಾನೀಗಲೇ ಬರುತ್ತೇನೆಂದುಕೊಂಡು ಮನೆಯೊಳಗೆ ಹೊಕ್ಕರು. ಮತ್ತೆ ಕೆಲಸಮಯದ ಅನಂತರ ಹೊರಕ್ಕೆ ಬಂದು:

"ನೋಡು ಬಾಬಣ್ಣ. ನಾಳೆಯೇ ನಾನು ಬೊಂಬಾಯಿಗೆ ಹೋಗಬೇಕೆಂದಿದ್ದೇನೆ. ನಮ್ಮ ರಾಮೂ ಬರಲೇಬೇಕೆಂದು ತಂತಿಕೊಟ್ಟಿದ್ದಾನೆ".

"ಅದೇನು ಸ್ವಾಮಿ. ಅವರಿಗೆ ಸೌಖ್ಯವಿಲ್ಲವೆ?"

"ಅವನಿಗೇನೋ ಗಂಟಲು ಒಪರೇಶನ ಮಾಡುವುದಿದೆಯಂತೆ! ಅದಕ್ಕಾಗಿ ಬರಲಿಕ್ಕೆ ಹೇಳಿದ್ದಾನೆ. ಆದರೆ ಇಲ್ಲಿ ನನ್ನ ಹೊಲ, ಮನೆ, ತೋಟಗಳನ್ನು ನೋಡವವರೊಬ್ಬರು ಬೇಕಲ್ಲ?"

" . . . . . . . "

"ಈ ಕೆಲಸವನ್ನು ನಿನಗೆ ಒಪ್ಪಿಸಬೇಕೆಂತ ಇದ್ದೇನೆ."

" . . . . . . . "

"ಆಗದೆ?"

"ಆಗದೇನು ಸ್ವಾಮಿ? ಆದರೆ . . . . . ."

"ಆದರೇನು? ಹೇಳು. ಸಂಕೋಚಪಡಬೇಡ".

"ಮೊದಲೇ ನಾನೆಂದರೆ ಉಳಿದ ರೈತರಿಗೆ ಆಗುವುದಿಲ್ಲ. ನಾನು ನಿಮ್ಮ

ಮೆಚ್ಚಿಕೆಯುವನೆಂದು ಅಧಿಕಾರ ತೋರಿಸುವೆನಂತೆ! ನೀವು ಇಲ್ಲಿರುವಾಗಲೇ ಅವರು ನನ್ನನ್ನು ಅಣಕಿಸುತ್ತಿರುವುದನ್ನು ನೋಡಿರಬಹುದು . . . . "

"ಅದೆಲ್ಲ ನಾನವರಿಗೆ ಕಟ್ಟಪ್ಪಣೆ ಮಾಡಿಯೇ ಹೋಗುತ್ತೇನೆ. ನೀನು ಹೆದರಬೇಕಾಗಿಲ್ಲ."

"ನೀವು ಬರುವುದು ಯಾವಾಗ ರಾಯರೆ?"

"ಅದೀಗ ನಿಶ್ಚಿತವಾಗಿಲ್ಲ. ಬಹುಶಃ ಹತ್ತು ಹದಿನೈದು ದಿನಗಳಲ್ಲೇ ಮರಳುತ್ತೇನೆ . . . . "

"ಅಂದರೆ . . . . ಈಗೀಗ ರಜಕಾರರ ಹಾವಳಿ ಹೆಚ್ಚಾಗಿದೆಯೆಂಬುದು ನಿಮಗೆ ತಿಳಿದಿರಬಹುದು . . . . ಹಾಗಿರುವಾಗ ಈ ಜವಾಬ್ದಾರಿ ವಹಿಸುವು ದೆಂದರೆ . . . . ಮೊನ್ನೆ ಪಕ್ಕದ ಹಳ್ಳಿಯಲ್ಲಿ ಎಂಟು ಜನರನ್ನು ಕೊಂದು, ಹೆಂಗಸರ ಅಪಮಾನ ಮಾಡಿದ್ದಾರಂತೆ. ಇದೆಲ್ಲಾ ಕೇಳಿದರೆ ನನಗೂ ಎಲ್ಲಾ ದರೂ ಹೋಗಬೇಕೆನಿಸುತ್ತಿದೆ."

"ನೀನು ಹೋಗುವುದಾದರೂ ಎಲ್ಲಿಗೆ?"

"ಎಲ್ಲಿಯೋ, ನೋಡಬೇಕು. ಯಾವುದಕ್ಕೂ ಅವಳ ಕಾಯಿಲೆಯೊಂದಿದೆ ಯಲ್ಲ? . . . . . "

"ಅದಿನ್ನೂ ನಿಲ್ಲಲಿಲ್ಲವೆ?"

"ಇಲ್ಲ ರಾಯರೆ."

"ಮದ್ದು ಮಾಡಿಲ್ಲವೆ? ಡಾಕ್ಟರರನ್ನು ಕರೆಸಲಿಲ್ಲವೆ?"

"ನಿನ್ನೆಯೇ ಡಾಕ್ಟರರು ಬಂದು ಹೋದರು. ಹತ್ತು ಹದಿನೆರಡು ಸೂಜಿ ಮದ್ದನ್ನು ಕೊಡಬೇಕೆಂದರು. ಒಂದೈವತ್ತು ರೂಪಾಯಿಗಳ ಖರ್ಚಾಗಬಹು ದೆಂದರು!"

"ಹಾಗೆಯೇ ಮಾಡು. ಅವಳನ್ನು ಹಾಗೆಯೇ ನರಳುವಂತೆ ಬಿಡಬೇಡ. ಹೀಗಿರುವಾಗ ಎಲ್ಲಾದರೂ ಹೋಗುವುದೇತಕ್ಕೆ? ಅದೂ ನಾನು ಇಲ್ಲಿಗೆ ಹಿಂತಿ ರುಗುವ ಮೊದಲು ಆ ಪ್ರಯತ್ನ ಮಾಡಬೇಡ."

" . . . . . . . "

"ಏನು ಸುಮ್ಮನಾದ? ಮಾತಾಡಲೊಲ್ಲೇಕೆ?"

"ಮಾತಾಡೋದೇನಿದೆ ರಾಯರೆ, ನೀವು ಹೇಳಿದಕ್ಕೆ ನನ್ನ ವಿರೋಧವಿಲ್ಲ. ಆದರೆ . . . ."

"ಆದರೇನು?"

"ಅಲ್ಲ, ಅವಳ ಕಾಯಿಲೆ ವಾಸಿಯಾಗಬೇಕಾದರೆ ಸೂಜಿ ಮದ್ದುಗಳನ್ನು ಇವತ್ತೇ ತಂದುಕೊಡಬೇಕಾಗಿ ಡಾಕ್ಟರರು ಚೀಟಿ ಬರೆದು ಕೊಟ್ಟಿದ್ದಾರೆ. ಅದಕ್ಕೆ ಒಂದೈವತ್ತು ರೂಪಾಯಿಗಳಾದರೂ ಬೇಕು."

"ಅದಕ್ಕೆ ನಾನೇನು ಮಾಡಬೇಕೆಂತಿದ್ದಿ?"

"ಅಷ್ಟು ಹಣ ಸಾಲಕೊಟ್ಟು ಬಡವನಿಗೆ ಉಪಕಾರ . . . . "

"ಪುನಃ ಪುನಃ ನೀನು ಸಾಲ ಕೇಳುತ್ತೀಯಲ್ಲ, ಬಾಬಣ್ಣ? ಕೊಟ್ಟ ಸಾಲ ಇನ್ನೂ ಮರಳಿ ಬಂದಿಲ್ಲ. ಹೀಗಾದರೆ ಹೇಗೆ? ನೀನೇ ನೋಡು. ಮತ್ತೆ ನಿನ್ನ ಕಷ್ಟ ನೋಡಿ, 'ಅಯ್ಯೋ'ಯೆನಿಸಿ ಕೊಡಬೇಕಾಗುತ್ತದೆ. ಆದರೆ ಸದ್ಯ ನನ್ನ ಕೈಯಲ್ಲಿರುವ ಹಣ ನಾಳೆ ಪ್ರಯಾಣದ ಖರ್ಚಿಗೆ ಬೇಕು. ಇವತ್ತೇ ನಾನೆಲ್ಲಿಂದ ಕೊಡಲಿ? . . . . ."

"ಹೇಗಾದರೂ ದೊಡ್ಡ ಮನಸ್ಸುಮಾಡಿ ಕೊಡಿ ರಾಯರೆ . . . . ನಿಮ್ಮ ಋಣಾನ ತೀರಿಸದೇ ಬಿಡೊಲ್ಲ . . . . ಸದ್ಯ ಅವಳು ಹುಷಾರಾದರೆ, ನಾನು ಏನಾದರೂ ಮಾಡಿ ಸಾಲ ತೀರಿಸಿಯೇನು . . . . "

"ಅದೆಲ್ಲ ಹೌದು, ಬಾಬಣ್ಣ. ನನಗೂ ಗೊತ್ತು ನಿನ್ನ ಕಷ್ಟಸುಖ. ಆದರೆ ನಮ್ಮ ಹತ್ತಿರ ಏನು ಹಣ ಬೆಳೆಯುತ್ತಾ ಇದೆಯೇನು? ಎಷ್ಟೋ ಜನರು ಸಾಲ ಕೊಂಡಿದ್ದಾರೆ. ವಾಪಾಸು ಕೊಡೊವಾಗ ಮಾತ್ರ ಯಾರೂ ಬರೋದಿಲ್ಲ. ನಾನೇ ಹೋಗಿ ಕೇಳಿಕೊಳ್ಳಬೇಕು. ಹೀಗಿದೆ ಕಾಲ. ಆದರೂ ನಿನಗೆ ಈ ಪರಿಸ್ಥಿತಿಯಲ್ಲಿ ನಾನು ಕೊಟ್ಟೇ ಕೊಡುತ್ತಿದ್ದೆ. ಆದರೆ ಇದೊಂದು ನಾಳೆಯ ಪ್ರಯಾಣ ಕೈಗೂಡಿವೆನಲ್ಲಾ. ಬಂದ ಮೇಲೆ ನೋಡುವಾ . . . . "

"ಆದರೆ ಈ ಮದ್ದು ತರಲಿಕ್ಕೇನು ಮಾಡಲಿ? ಇವತ್ತೇ ತರಿಸಿಕೊಡ ಬೇಕೆಂದಿದ್ದಾರೆ, ಡಾಕ್ಟರರು. ಕಾಯಿಲೆ ಕೂಡಾ ಹೆಚ್ಚಾಗುತ್ತಾ ಇದೆ . . . . . . . . ನೀವು 'ಇಲ್ಲಾ'ಂದ್ರೆ ನಾನು ಯಾರೊಡನೆ ಬೇಡಿ ತರಲಿ ರಾಯರೆ? ದಯವಿಟ್ಟು ಇನ್ನೊಂದು ಸಲ. . . . . "

"ಅಯ್ಯೋ! . . . ಇನ್ನೂ ಅದೇ ಅದೇ ಹೇಳುತ್ತೀಯಲ್ಲ, ನೀನು? ! . . . ನನ್ನ ಪರಿಸ್ಥಿತಿ ನಿನಗೆ ತಿಳಿಸಿದೆ. ನಿನ್ನ ಕಷ್ಟ ನೀನು ಹೇಳಿಕೊಳ್ಳುತ್ತಿ. ಇರಲಿ ನೋಡೋಣ. ಸಂಜೆ ಈ ಕಡೆ ಬಂದೇ ಬರುವಿಯಲ್ಲ. ಆವಾಗ ನೋಡಿ

ಹೇಳ್ತೀನೆ. ಈಗ ನನಗೆಲ್ಲಾ ನಾಳಿನ ತಯಾರಿ ಮಾಡಲಿಕ್ಕಿದೆ. ಹೋಗು . . . ಮತ್ತೆ ಬಾ . . . "

ಪೂರ್ಣ ನಿರಾಶೆಯಾಗದಿದ್ದರೂ ಆ ಒಂದು ಕ್ಷಣಕ್ಕೆ ಬಾಬಣ್ಣ ತುಂಬಾ ನೊಂದಿದ. ಮೃತ್ಯುವಿನ ದವಡೆಗೆ ಸಿಕ್ಕು ನರಳುತ್ತಿರುವ ತನ್ನ ನೆಚ್ಚಿನ ಪತ್ನಿಯು ಚಿತ್ರವನ್ನು ನೆನೆನೆನೆದು ಅವನ ಕಣ್ಣುಗಳು ನೆನೆದುವು . . . ಇರಲಿ ಮತ್ತೆಯಾದರೂ ಕೊಡದೆ ಇರಲಾರರೆಂಬ ಆಸೆಯು ಸಮಾಧಾನದಿಂದ ಲಗುಬಗೆಯಾಗಿ ಮನೆಗೆ ಮರಳಿದ.

ಮನೆಯನ್ನು ಸಮೀಪಿಸುತ್ತಲೇ ನರಸಣ್ಣ ದಾರಿಕಾಯುತ್ತಿದ್ದವ ಎದುರು ಬಂದು ನಿಂತ.

"ಏನು ಬಾಬಣ್ಣಾ, ಹೋದ ಕೆಲಸ ಏನಾಯಿತು? ಮದ್ದು ತಂದಿಟ್ಟೇಯಾ? . . . . "

ಬಾಬಣ್ಣ ಸನ್ನೆಯಿಂದಲೇ 'ಇಲ್ಲ'ವೆಂದು ಸೂಚಿಸಿದ. ಮತ್ತೇ ಸಾವಕಾಶವಾಗಿ ಜಮೀನುದಾರನಿಗೂ ತನಗೂ ಆದ ಮಾತುಕತೆಗಳನ್ನು ವಿವರಿಸಿ ಹೇಳಿದ. ಬಾಬಣ್ಣನ ತಾಯಿಯೂ ಇವರಾಡಿದ ಮಾತುಗಳನ್ನು ಅಲ್ಪ ಸ್ವಲ್ಪ ಕೇಳುತಿದ್ದಳು.

"ಅಂತೂ ಬರಿಗೈಯಲ್ಲಿ ಬಂದೆಯಲ್ಲ!" ಎದೊಂದು ನಿಟ್ಟುಸಿರಬಿಟ್ಟಳು, ಮುದುಕಿ ತಾಯಿ.

"ಅವನಾದರೂ ಏನು ಮಾಡಿಯಾನು? ಆ ಧನ ಪಿಶಾಚಿಯುವರ ಕಣ್ಣಲ್ಲಿ ರಕ್ತವಿದೆಯೆ? ನಾಳೆ ದುಡ್ಡು ಬರುತ್ತದಂದ್ರೆ ಮನುಷ್ಯರನ್ನೇ ಮಾರಿ ಜೀವಿಸುವಂತಹ ಜಮೀನುದಾರರು, ಅವರು. ನಮ್ಮ ಬಡತನದಿಂದ ನಾವಿಂದು ಅವರ ಒಕ್ಕಲುತನ ಮಾಡುತಿದ್ದೇವೆಯೇ ಹೊರತು, ಮತ್ತೇನಿಲ್ಲ. ಅದಕ್ಕೆ ನಾನೂ ಈ ಹಾಳು ಒಕ್ಕಲುತನ ಬಿಟ್ಟು ಕೂಲಿ ಕೆಲಸ ಮಾಡಲಿಕ್ಕೆ ತೊಡಗಿದ್ದು. ಏನೋಪ್ಪ. ದೇವರ ದಯೆಯಿದ್ದರೆ, ದಿನಕೂಲಿ ಮಾಡಿದರೆ ಎರಡು ರೂಪಾಯಿಗಳಾದರೂ ಸಿಕ್ಕುತ್ತೆ. ಈಗಂತೂ ಕೆಲಸ ಹೆಚ್ಚಿದೆ. ಕೂಲಿ ಕೆಲಸಾಂದ್ರೆ ನಾವು ಕೇಳಿದ ದುಡ್ಡು ಕೊಟ್ಟೇ ಕೊಡ್ತಾರೆ . . . . ಹಾಗೇ ಒಂದು ದಿವಸ ಬೇಡಾಯಿತೆಂದರೆ ಸುಮ್ಮನೆ ಕೂಡೋದು. ಯಾರ ಹಂಗೂ ನಮಗಿಲ್ಲ! ಜಮೀನುದಾರರೇ ಆಗಲಿ, ಯಾರೇ ಆಗಲಿ, ನಮ್ಮನ್ನು ಕೇಳೋವ್ರು ಯಾರಂತೆ? ಯಾವುದಕ್ಕೂ ಧೈರ್ಯ ಬೇಕು . . . . ಧೈರ್ಯ! ಮನುಷ್ಯ ಇವತ್ತೆಲ್ಲಾ ಹೀಗೆ ಒಬ್ಬರ

ಗೊಬ್ಬರು ಹೆದರೋದನ್ನು ಇನ್ಮುಂದೆ ಬಿಡಬೇಕು . . ." ನರಸಣ್ಣ ತನ್ನ ಅನುಭವದೊಳಗಿನ ವೇದಾಂತ ಬೋಧಿಸತೊಡಗಿದ. ಬಾಬಣ್ಣನ ತಾಯಿ ನಡುವೆ ಮಾತೆತ್ತಿದಳು.

"ಅದೆಲ್ಲಾ ನಿನ್ನಂತಹನಿಗೆ ಸರಿಹೋಯಿತು, ನರಸ? ನಮ್ಮ ಬಾಬು ದಾಕ್ಷಿಣ್ಯದ ಮುದ್ದೆ. ಅವರು 'ಹಾಂ' ಅಂದೇ 'ಹೂಂ' ಅಂತಾನೆ. ಅವರೇನು ಹೇಳಿದರೂ ಸರಿ, ವೇದವಾಕ್ಯ ಅಂತ ತಿಳಕೊಂಡು ಬಿಡ್ತಾನೆ. ಬಾಯಿ ಬಿಟ್ಟು ಹೇಳಲಿಕ್ಕೆ ಇವನಿಗೆ ನಾಚಿಕೆ. ಇಲ್ಲಾದರೆ, ಸಾಲ ಕೇಳೋವಾಗ ನಿಜಸ್ಥಿತಿಯೆಲ್ಲಾ ಹೇಳಬೇಡವೆ?"

"ಅಮ್ಮಾ, ನೀನ್ಯಾಕೆ ಹಾಗೆ ನನ್ನನ್ನು ಹಂಗಿಸುತ್ತಿದ್ದಿಯೋ? ನಿನಗೇನು ಗೊತ್ತು? ಅವರ ಕಾಲಿಗೆ ಬಿದ್ದು ಕಣ್ಣೀರು ಸುರಿಸಿ ಹೇಳಿದೆ. ನಾಳೆ ಬೊಂಬಾಯಿಗೆ ಹೋಗಲು ಹೊರಟು ನಿಂತಿದ್ದಾರೆ. ಈಗ ಹಣ ಎಲ್ಲಿಂದ ಕೊಡಲಿ? ಅಂದರು, ರಾಯರು. ಅಲ್ಲದೆ ಹಿಂದಿನ ಸಾಲದ ಪ್ರಸ್ತಾಪವನ್ನೂ ಎತ್ತಿದರು. ನಾನೇನು ಹೇಳಲಿ ಅವರಿಗೆ? ಆದರೂ ಸಂಜೆ ಬಂದು ಹೋಗು ಎಂದಿದ್ದಾರೆ".

"ಕೊಡುವ ಮನಸ್ಸಿದ್ದರೆ, ಸಂಜೆ ಬಾ, ನಾಳೆ ಬಾ ಅಂತ ಯಾಕೆ ಹೇಳಬೇಕು?" ನರಸಣ್ಣ ನಡುವೆ ಪ್ರಶ್ನೆ ಹಾಕಿದ.

"ನೋಡಪ್ಪ, ಸಂಜೆಯಾದರೂ ಅವರು ಹೇಗಾದರೂ ಕೊಡುವಂತೆ ಒತ್ತಾಯ ಪಡಿಸು. ಸುಮ್ಮನೆ ಹೀಗೆ ಕೂತು ದಿನಾ ಕಳೆದರೆ . . . . ಅವಳ ಸ್ಥಿತಿ . . . " ಎಂದಳು ಅವನ ತಾಯಿ.

ನರಸಣ್ಣ ತುಸು ಯೋಚನಾಮಗ್ನನಾಗಿದ್ದ. ಅಷ್ಟರಲ್ಲಿ ಒಳಗಿನಿಂದ ಬಾಬಣ್ಣನ ಹೆಂಡತಿ ಜ್ವರದ ಭರದಲ್ಲಿ ಎದ್ದು ಹುಚ್ಚುಚ್ಚು ಮಾತಾಡುತ್ತಾ ಹೊರಗೆ ಓಡಿ ಬಂದಳು! ಬಾಬಣ್ಣನೂ ನರಸಣ್ಣನೂ ಓಡಿ ಹೋಗಿ ಅವಳ ಕೈ ಹಿಡಿದೆಳೆದು ಮರಳಿ ಹಾಸಿಗೆಯಲ್ಲಿ ಮಲಗಿಸಿದರು. ಅವಳಾಗಲೂ, "ನನ್ನ ಯಾಕೆ ಹಿಡಿದಿದ್ದೀರಿ . . . ನಾನು ಹೊರಟೆ . . . ಅದೋ ಅಲ್ಲಿ ಬಂದಿದ್ದಾರೆ . . . ನನ್ನನ್ನು ಎಳೆದೊಯ್ಯೊದಕ್ಕೆ . . . ಅವರೆ! ಹಿಂದೆ ನಮ್ಮ ಪುಟ್ಟೂನ ಎತ್ತಿಕೊಂಡು ಹೋದವರು. ಈಗ ನನ್ನನ್ನೆತ್ತಿಕೊಂಡು ಹೋಗುತ್ತಾರೆ . . . . ಪುಟ್ಟು . . . ಬಂದೆ . . . ಅಳಬೇಡ ಕಂದಾ . . . ನಾ ಬಂದೆ . . . . ನಿನ್ನನ್ನೆತ್ತಿಕೊಳ್ಳೋದಕ್ಕೆ . . . ಹೂಂ . . ." ಜ್ವರ ಏರುತ್ತಲೂ ಅವಳು ಗೋಳೋ ಎಂದು ಬೊಬ್ಬಿಡುತ್ತಾ ಪ್ರಲಾಪಿಸತೊಡಗಿದಳು.

ಆ ಹಿಂದಿನ ನೆನಹು ಅವಳ ಸ್ಮೃತಿಯನ್ನು ಕೆರಳಿಸಿರಬೇಕು. ಅದೇ ಎರಡು ವರ್ಷದ ಪುಟ್ಟು-ಬಾಬಣ್ಣನ ಮೊದಲ ಗಂಡುಮಗು-ಜ್ವರದಿಂದ ಮಲಗಿತ್ತು. ತಾಯಿ ಮಗುವನ್ನು ತೊಡೆಯ ಮೇಲೆ ಮಲಗಿಸಿ ದಿನ ದೂಡುತ್ತಲಿದ್ದಳು. ಏನು ಮಾಡಿದರೂ ಕಾಯಿಲೆ ವಾಸಿಯಾಗಲೇ ಇಲ್ಲ. ಕೊನೆಗೊಂದು ದಿನ ಹೀಗೆ ಡಾಕ್ಟರರನ್ನು ಕರೆಸಿಯಾಯಿತು. ಆದರೆ . . . ಮದ್ದು ಕೊಡಲು ಕೈಯಲ್ಲಿ ಕಾಸಿಲ್ಲ. ಜಮೀನುದಾರ 'ಕೊಡೋದೇ ಇಲ್ಲಾಂತ' ಬೈದು ಕಳುಹಿಸಿದ. ಅವರಿಗಾಗ ಹಿಂದಿನ ಸಾಲ-ತನ್ನ ಅಪ್ಪ ಮಾಡಿದ ಸಾಲ ಇನ್ನೂ ತಲೆಯಲ್ಲಿ ಸುಳಿದಿತ್ತು . . . ಧನಮದದಿಂದ ಕೊಬ್ಬಿ ಬೆಳೆದಿದ್ದ ರಾಯರು . . . . ಅವರು ಕೊಡದೆ ಇದ್ದ ನಿರಾಶೆಯಿಂದ ಬಾಬಣ್ಣ ಹಿಂತಿರುಗಿದ್ದ. ಮನೆ ಸಮೀಪಿಸುತ್ತಲೇ ರೋದನ ಕೇಳಿಸಿತ್ತು. ತಕ್ಷಣ ಓಡಿಹೋಗಿ ನೋಡಿದ. ತಣ್ಣಗೆ ಮಲಗಿದ್ದ ಮುದ್ದು ಪುಟ್ಟು . . . .

ಆ ಪುಟ್ಟೂ ಹೆಸರು ಎತ್ತಿದ್ದ ಬಾಬಣ್ಣನ ನರಗಳು ಬಿದ್ದುವು. ಹಿಂದಿನ ದುರಂತ ಚಿತ್ರಗಳು ಕಣ್ಣಮುಂದೆ ಸುಳಿದು ಮಿಂಚಿ ಮಾಯವಾದವು . . .

ನರಸಣ್ಣ ಗಂಡು ದನಿಯಿಂದ ಬಾಬಣ್ಣನಿಗೆ ಸಮಾಧಾನ ಮಾಡಿದ . . . "ಇದೆಲ್ಲ ಆ ಜ್ವರದ ಆವೇಶ . . . . . ಗಾಬರಿಯೇನೂ ಆಗುವ ಕಾರಣವಿಲ್ಲಪ್ಪ . . . ." ಅಂತ ತಾಯಿ ಮಗನಿಗೆ ಸಮಾಧಾನ ಹೇಳಿದಳು.

ಹೀಗೆ ಕೆಲಕಾಲ, ಗಂಭೀರ ವಾತಾವರಣ ಆ ಮನೆಯನ್ನಾವರಿಸಿತ್ತು . . . . .

ನರಸಣ್ಣ ಮತ್ತೆ ಹೊರಗೆ ಬಂದು ಮೆಲ್ಲಗೆ ಬಾಬಣ್ಣನಿಗೆ ಹೇಳಿದ:

"ಇಕೋ ಬಾಬಣ್ಣ-ನನ್ನ ಕೈಲಿದ್ದದ್ದೇ ಇಷ್ಟು. ಈ ಹತ್ತು ರೂಪಾಯಿನಿಂದ ಇವತ್ತಿಗೆ ಬೇಕಾದ ಮದ್ದನ್ನು ತಗೊಂಡು ಬಾ, ನಾಳೇನದು ನಾಳೆ ನೋಡೋಣ. ಸದ್ಯ ಜ್ವರ ಕೆಳಗಿಳಿಯಲಿ. ಒಂದೈವತ್ತು ರೂಪಾಯಿ ನನ್ನ ಕೈಲಿದ್ದಿದ್ದರೆ, ನಾನು ನಿನಗೆ ಜಮೀನುದಾರನಲ್ಲಿ ಬೇಡಲಿಕ್ಕೆ ಕಳುಹಿಸುತಿದ್ದಿಲ್ಲ. ಆದರೆ . . . ನನ್ನ ಸ್ಥಿತೀ . . . ಊಟಕ್ಕೇನೂ ಅಡ್ಡಿಯಿಲ್ಲ . . . ಆದರೂ ಹಣ ಕೂಡಿಸಿಡುವುದು ಯಾರಿಗಾಗಿ? ಮನುಷ್ಯ ಇವಾಗ ಸರಿಯಾಗಿ ಉಂಡು ತಿನ್ನೋದು ಬಿಟ್ಟು . . . . ಜಮೀನುದಾರರ ಹಾಗೇ ಬಡವರ ಮೇಲೆ ಕನಿಕರ ಇಲ್ಲದವರಂತೆ, ಆಸ್ತಿಪಾಸ್ತಿ ಕಟ್ಟಿಕೊಂಡಾದ್ರು ಏನಾಗಬೇಕು? . . . " ಎಂದು ತನ್ನ ಅನುತಾಪವನ್ನು ಕಾರ್ಯತಃ ತೋರಗೊಟ್ಟನು ನರಸಣ್ಣ.

ಬಾಬಣ್ಣ ಕೃತಜ್ಞತೆಯ ಕಂಗಳಿಂದ ಒಮ್ಮೆ ನರಸಣ್ಣನೆಡೆ ನೋಡಿ ಮುಗುಳು ನಕ್ಕನು . . . ಬಡವರಿಗೆ ಬಡವರೇ ಗತಿಯೆಂದು ಅವನ ಮನಸ್ಸು ಒಮ್ಮೆಗೆ ಹಗುರಾಯಿತು.

"ಇನ್ನಾದರೂ ಪೇಟೆಗೆ ಹೋಗಿ ಬಾ, ಮಗೂ. ಬರುವಾಗ ಡಾಕ್ಟರ ರನ್ನು ಕರೆದು ತಾ . . ." ಎಂದು ಬಾಬಣ್ಣನ ತಾಯಿ, ನರಸಣ್ಣನೆಡೆಗೆ ಕೃತಜ್ಞತಾ ಪೂರ್ವಕ ದೃಷ್ಟಿ ಬೀರಿ, ಮಗನಿಗಂದಳು.

ತಾನೂ ಸ್ವಲ್ಪ ದೂರ ಬರುವೆನೆಂದು ನರಸಣ್ಣ ಬಾಬಣ್ಣನೊಡನೆ ಪೇಟೆಗೆ ಹೊರಟ. ದಾರಿಯಲ್ಲಿ, "ಬಾಬಣ್ಣ, ನಾನೆಷ್ಟೆಂದರೂ ಮನೆ ಹೊರಗಿನವ. ಆದರೂ ನನ್ನನ್ನು 'ಹಿರಿಯಾಂತ' ನೀನು ಮರ್ಯಾದೆ ಕೊಡುತ್ತಿ. ಅದಕ್ಕಾಗಿ ನಿನ್ನ ಒಳ್ಳೇಯದಕ್ಕಾಗಿ ನಾನು ಹೇಳ್ತೇನೆ . . . ."

"ದೇವರೇ ಕಳುಹಿಸಿರಬೇಕು, ನಿಮ್ಮನ್ನು . . . ಬಾಬಣ್ಣನೆಂದ. ನಿಮ್ಮ ಉಪಕಾರ ನಾನೆಷ್ಟಕ್ಕೂ ಮರೆಯಲಾರೆ. ನರಸಣ್ಣ . . . . ನಿಜಕ್ಕೂ ನಾ ಮಾಡಿದ್ದು ತಪ್ಪಾಯ್ತು. ಈ ಜಮೀನುದಾರನ ಮಾತಿಗೆ ಒಪ್ಪಬಾರ ದಿತ್ತು . . . ."

"ಒಪ್ಪಿದರೇನಾಯ್ತು, ಈಗ? ಇವತ್ತೇ ಸಂಜೆಗೆ ಹೇಳು. ಮನೆಯಲ್ಲಿ ಕಾಯಿಲೆ, ಮನೆಬಿಟ್ಟು ಬರಲಿಕ್ಕಾಗುವುದಿಲ್ಲ, ಅನ್ನು. ಆವಾಗ ಅವರೇನು ಹೇಳ್ತಾರೋ ನೋಡೋಣ. ಒಂದು ವೇಳೆ ನೀನು ಕೇಳಿದ ಹಣ ಕೊಡುವ ಹಾಗಿದ್ದರೆ, ಒಪ್ಕೊ. ಮನೆ ಚಿಂತೆ ಬೇಡಾ. ನಾನು ಮನೆಯನ್ನು ನೋಡಿ ಕೊಂಡಿರುತ್ತೇನೆ, ಒಂದ್ಹತ್ತು ದಿವ್ಸ. ಯಾವುದಕ್ಕೂ ನೀನು ಸರಿಯಾಗಿ ಅವ ರೊಡನೆ ಮಾತನಾಡಬೇಕು. . . . . . . "

ನರಸಣ್ಣನ ಈ ಉಪಾಯ ಬಾಬಣ್ಣನಿಗೆ ಸೂಕ್ತವೆನಿಸಿತು. ಹಾಗೇ ಮಾಡುವೆನೆಂದು ತಾನು ಪೇಟೆ ದಾರಿ ಹಿಡಿದ. ನರಸಣ್ಣ ಹಿಂತಿರುಗಿದ.

* * * * *

ಸಂಜೆ ಸರಿದು ಕತ್ತಲಾಗಿದ್ದಿತು. ಜಮೀನುದಾರ ತಮ್ಮ ಪ್ರಯಾಣದ ಸಿದ್ಧತೆಗಳನ್ನು ಮಾಡುತ್ತಾ ಅತ್ತಿಂದಿತ್ತ ಆಳುಗಳನ್ನು ಓಡಿಸುತ್ತಿದ್ದ. ಕತ್ತಲಾ ದುದನ್ನು ಅರಿತು, 'ಇನ್ನೂ ಬಾಬಣ್ಣ ಬರಲಿಲ್ಲವೆ?' ಎಂದು ತನ್ನೊಬ್ಬ ಆಳನ್ನು ಕರೆದು ಹೇಳಿದ.

ಬಾಬಣ್ಣ ಆಗಲೇ ಬಂದಿದ್ದ. "ನಾನಿಲ್ಲಿದ್ದೇನೆ, ರಾಯರೇ . . ." ಎಂದ.

"ಬಂದಿಯಾ . . . . ಸರಿ, ಕೂತುಕೋ" ಎಂದರು. ಅವರೂ ಕೆಲಸದ ಮೇಲಿದ್ದರು. ಅವರಿಗಾಗಿ ತುಸು ತಡೆದು ಕುಳಿತುಕೊಳ್ಳಬೇಕಾಯಿತು, ಬಾಬಣ್ಣನಿಗೆ. ಸುಮಾರು ಒಂದು ಗಂಟೆಯಾದರೂ ರಾಯರಿಗೆ ಬಾಬಣ್ಣ ನೊಡನೆ ಮಾತನಾಡಲೂ ಬಿಡುವೇ ಇಲ್ಲ. ಮಾತಾಡಿದರೂ "ಅದು ಇಲ್ಲಿ ತಾ . . . ಹಾಗೇ ಬಾ . . . ಹೀಗೆ ಇಡು" ಎಂದು ಬಿಟ್ಟೇ ಕೆಲಸಗಳಿಗಾಗಿ ಕರೆಯುತ್ತಿದ್ದರು. ರಾತ್ರಿಯಾಯಿತೆಂದು, ಕೆಲಸ ಮುಗಿಸಿ ಉಳಿದಿಬ್ಬರು ಆಳು ಗಳೂ ಹೊರಟು ಹೋದರು. ಸಾಧಾರಣ ಎಂಟು ಘಂಟೆ ಹೊಡೆಯುತ್ತಲೇ, ರಾಯರು ಊಟ ಮುಗಿಸಿಯೇ ಹೊರಬಂದರು. ಬರುವಾಗ ಅವರ ಕೈಯಲ್ಲಿ ಒಂದಷ್ಟು ಸೇಬು ಹಣ್ಣು ಮುಸುಂಬಿಗಳಿದ್ದುವು.

"ಎಲ್ಲಾ . . . . ಒಂದೇ ಸರ್ತಿಗೆ ಮುಗಿದ ಹಾಗಾಯಿತು" ಎಂದರು ರಾಯರು. ಬಾಬಣ್ಣ ಏನೂ ಮಾತನಾಡಲಿಲ್ಲ . . . . ರಾಯರು ಸೇಬು ಹಣ್ಣನ್ನು ಚೂರಿಯಿಂದ ಹೋಳು ಮಾಡುತ್ತಾ.

"ನೀನು ಊಟ ಮುಗಿಸಿದ್ದಿಯೋನೋ? ಹೊತ್ತು ಬೇರೆ ಆಯ್ತು."

"ಇಲ್ಲ, ಇನ್ನು ಹೋಗಿ ಮಾಡಬೇಕು. ರಾಯರೆ, ನಾನು ಬೆಳಿಗ್ಗೆ ಹೇಳಿದ್ದು . . . . ಏನಾದ . . . ."

"ಇಷ್ಟ್ಹೊತ್ತೂ ನಾನು ಅದೇ ಯೋಚನೆಯಲ್ಲಿದ್ದೆ. ಆದರೆ ಏನು ಮಾಡಲಿಕ್ಕೂ ಈಗ ಸಾಧ್ಯ ಇಲ್ಲ, ನೋಡು. ನನಗೆ ನಾಳೆಯೇ ಹೊರಡ ಬೇಕು. ಬಂದ ಮೇಲೆಯಾದರೆ ಹಣ ನಿನಗೆ ಕೊಡಿಸುತ್ತೇನೆ . . . ಈಗ ನೀನು ಬೇರ್‍ಯಾರ ಬಳಿಯಲ್ಲಿ ಸಾಲ ಇಸಕೊ . . . . "

"ನನಗೆ ಸಾಲ ಕೊಡುವವರು ಯಾರು ಸ್ವಾಮಿ? ನಿಮ್ಮನ್ನೇ ನಂಬಿದೆ. ನೀವೂ ಹೀಗೆಯೇ ಬಿಟ್ಟರೆ? . . . ."

"ಮತ್ತೇನು ಮಾಡಬೇಕು, ಹೇಳು? ಇದ್ದರೆ ನಾನು ಕೊಡೋದಿಲ್ಲ ವೆನ್ನುವೆನೆ?"

"ಅಂತೂ ನಿಮ್ಮಿಂದ ಸಿಗೋ ಹಾಗಿಲ್ಲ . . . . " ನಿರಾಶೆಯೊಡಗೂಡಿದ ಜಿಗುಪ್ಸೆಯಿಂದ ಬಾಬಣ್ಣ ನುಡಿದ. ಅವನ ಹೊಟ್ಟೆಯಲ್ಲಿ ಮಾತ್ರ ಕಿಚ್ಚು ಉರಿಯುತ್ತಲಿತ್ತು. ಅದಕ್ಕೆ ಅವನಂದ, "ಇನ್ನೊಂದು ಮಾತು ನಾನು ಹೇಳಬೇಕೆಂದಿದೆ. ನನ್ನ ಮನೆ ಕಾಯಿಲೆ ವಿಷಯ ನಿಮಗೆ ತಿಳಿದೇ ಇದೆ.

ಇದರಿಂದ ನನಗೆ ನೀವು ಹೇಳಿದಂತೆ ಮನೆಕಾವಲಿಗೆ ಇಲ್ಲಿ ಬರಲಿಕ್ಕಾಗುವುದಿಲ್ಲ. . . . ."

"ಅಲ್ಲ, ಒಮ್ಮೆ ನೀನು ಒಪ್ಪಿದ್ದಿ. ಆಗ ನೀನು ಈ ವಿಚಾರ ಮಾಡಲಿಲ್ಲವೋ . . . ? ಈಗೇಕೆ ಬದಲಾವಣೆಯಾಯಿತು? "

"ರಾಯರೇ, ನೀವು ನಿಮ್ಮ ಹಿತದೃಷ್ಟಿಯಿಂದಲೇ ಮಾತನಾಡುತ್ತೀರಿ. ನಮ್ಮ ಸುಖದುಃಖ ನಿಮಗೆ ಬೇಕಾಗಿಲ್ಲ. ಕಷ್ಟದಲ್ಲಿದ್ದಾಗ ಸಹಾಯ ಮಾಡಲಿಕ್ಕೆ ಹಿಂಜರಿಯುತ್ತಿದ್ದೀರಿ. ಆದರೆ ನಿಮಗಾಗಿ ನಾವು ಏನು ಮಾಡಲಿಕ್ಕಾದರೂ ಸಿದ್ಧರಿರಬೇಕಲ್ಲವೆ? ರಜಕಾರರ ಭಯ ನಿಮಗೂ ಇರುವಂತೆ ನಮಗೂ ಇರಲಾರದೇಕೆ?"

"ಬಾಬಣ್ಣ! ನೀನು ಸ್ವಲ್ಪ ಯೋಚಿಸಿ ಮಾತನಾಡು, ನಾಲಗೆಯನ್ನು ಬಿಗಿ ಹಿಡಿದುಕೋ . . . . . ಯಾರೊಡನೆ ನೀನು ಮಾತನಾಡುತ್ತಿಯೆಂತ ತಿಳಿದಿರುವೆಯಲ್ಲ? . . . . . . "

"ತಿಳಿದೇ ಮಾತನಾಡುತ್ತಿದ್ದೇನೆ. ನಿಮ್ಮೆದುರಿಗೆ ಹೇಳುತಿದ್ದೇನೆ. ನಿಮ್ಮ ಮನೆ ಕಾವಲಿಗೆ ನಾನು ನಿಮಗೆ ಬೇಕು. ನನಗೊಂದಷ್ಟು ಹಣ ಸಾಲ ಕೊಡಲಿಕ್ಕೆ ನಿಮ್ಮಿಂದಾಗದು."

"ನನಗೆ ಕೊಡಲಿಕ್ಕಿಷ್ಟವಿಲ್ಲ, ಕೊಡುವುದಿಲ್ಲ . . . ಹೆಚ್ಚಿಗೆ ಮಾತಾಡಿದರೆ ನಿನಗೆ ಕೊಟ್ಟ ಸಾಲ ಮೊದಲು ತೀರಿಸಿಕೋ, ಮತ್ತೆ ಮಾತನಾಡು . . . . "

"ಅದೇ ನಾನು ಹೇಳಿದೆಯಲ್ಲ. ನಿಮಗಿಷ್ಟವಿಲ್ಲದ್ದರಿಂದಲೇ ನಿಮ್ಮವರ ಸೇವೆ ಮಾಡಲು ನನಗೂ ಇಷ್ಟವಿಲ್ಲ!"

"ಅಂದರೆ, ನಿನ್ನ ಸ್ಥಿತಿಯೇನಾಗಬಹುದೆಂದೂಹಿಸಿರುವಿಯಾ? ಸದ್ಯ ನೀನು ನನ್ನ ನೌಕರ. ನಾನು ಹೇಳಿದ್ದನ್ನು ಕೇಳಲೇಬೇಕು. . . . "

"ಕೇಳುತ್ತಿದ್ದೆ. ಆದರೆ . . . ."

"ಆದರೇನು . . . . ? ಹೇಳು. . . . ."

"ಈಗಲೂ ಹೇಳುತ್ತೇನೆ. ನೀವು ಸಾಲ ಕೊಡಲು ಸಿದ್ಧರಿದ್ದರೆ . . . !"

"ಅಂತೂ ಈ ಒಂದು ನೆವನ ಹಿಡಿದು ನನ್ನೊಡನೆ ಆಡಲು ಬಯಸುತ್ತೀಯಾ? ಒಳ್ಳೇಯದು. ಹಣ ನಿನಗೆ ಸಿಗಲಾರದು. ಅಲ್ಲದೆ ಇವತ್ತೇ ನೀನು ಹೊಲ ಬಿಟ್ಟುಕೊಡಬೇಕು. ಸಾಲ ತೀರಿಸದಿದ್ದರೂ ಚಿಂತಿಲ್ಲ. ನಿನ್ನಂತಹನ

ಮೋರೆ ಸಹ ನೋಡಲಾಗದು. ಈ ಒಂದು ರಾತ್ರಿ ಕೂಡಾ ನೀನು ಆ ಮನೆಯಲ್ಲಿರಬಾರದು. . . . . ಹೂಂ . . . ."

"ನೀವು ಹೀಗೆ ಅಧಿಕಾರ ತೋರಿಸಿದರೆ, ಇವತ್ತಿಗೆ ನಡೆಯದು. ಈಗಲೇ ಹೊಲ ಬಿಟ್ಟುಕೊಡಲು ಸಾಧ್ಯವಿಲ್ಲ. ಹಾಗೇ ಬಿಡಬೇಕೆಂದು ನೀವು ಹಟ ಹಿಡಿದರೆ ಅದರಿಂದ ಬರುವ ಉತ್ಪತ್ತಿಯ ಪಾಲಿನ ಹಣವನ್ನು ಈಗಲೇ ಕೊಟ್ಟು ಬಿಡಿ."

"ಏನು! ಕಾನೂನು ಮಾತನಾಡಲಿಕ್ಕೆ ಆರಂಭಿಸಿದೆಯಾ? . . . . ಹೊರಡಾಚೆ . . . . ಹೆಚ್ಚಿಗೇನಾದರೂ ಬೊಗಳಿದರೆ, ಆಳನ್ನು ಕರೆಸಿ ಹೊರಗೆ ನೂಕುತ್ತೇನೆ."

"ಹೊರಡು! ಆಹಾ! ಎಷ್ಟು ಸುಲಭ ನಿಮಗೆ ಹೇಳಲಿಕ್ಕೆ! ನನ್ನನ್ನು ಹೊರ ನೂಕುವ ಮುಂಚೆ ನಿಮ್ಮ ಜೀವ ಉಳಿದೀತೆಂದು ತಿಳಿಯಬೇಡಿ . . . " ಎಂದು ರೊಚ್ಚಿಗೆದ್ದ ಬಾಬಣ್ಣ ಅವರ ಬದಿಗಿದ್ದ ಉದ್ದವಾದ ಚೂರಿಯನ್ನು ರಭಸದಿಂದ ಕೈಯಲೆತ್ತಿಕೊಂಡನು.

ಜಮೀನುದಾರನ ಮುಖ ಬೆವರಿತು, ದೇಹ ನಡುಗಿತು. ಅರ್ಧ ಧೈರ್ಯ ಅರ್ಧ ಅಂಜಿಕೆಯಿಂದ ಬಾಬಣ್ಣನನ್ನು ದುರಗುಟ್ಟಿ ನೋಡಿದ.

"ನನ್ನನ್ನೀಗ ನೀನು ಕೊಲ್ಲುವಿಯಾ? ಅದರ ಪರಿಣಾಮವೇನಾಗಬಹುದೆಂದು ಯೋಚಿಸು."

"ಎಲ್ಲವನ್ನೂ ಯೋಚಿಸಿದ್ದೇನೆ. ನನ್ನ ಜೀವದ ಪರಿವೆ ನನಗಿಲ್ಲ. ಹಾಗಿದ್ದುದರಿಂದಲೇ ನಾನು ನಿಮಗಾಗಿ ಅದನ್ನು ತ್ಯಜಿಸಲು ಕೂಡಾ ಸಿದ್ಧನಾದೆ. ಆದರೆ . . . ಆದರೇನು? ಬಂಡೆಕಲ್ಲಿನ ಮೇಲೆ ನೀರು ಸುರಿದಂತೆಯೇ ಸರಿ. ಕೃತಘ್ನರು! ಮೂಢರು! ಕಣ್ಣಿದ್ದ ಕುರುಡರು!! ಹಣದ ಹೊರತು ಇನ್ನಾವುದನ್ನೂ ಅರಿಯದ ಧನಪಿಶಾಚಿಗಳು!!! ನಿಮ್ಮಂತಹರು ಇದ್ದುದರಿಂದಲೇ ನನ್ನಂತಹ ಸಾವಿರಾರು ಮಂದಿ ಗೋಳಾಡಬೇಕಾಗಿದೆ. ಇಂದಲ್ಲದಿದ್ದರೆ ನಾಳೆ ಈ ಪೀಡೆ ತೊಲಗಬೇಕು, ಹೋಗಲಾಡಿಸಬೇಕು. ಇಂದೇ ಹೋಗಲಾಡಿಸಿದರೆ ಒಳ್ಳೇದಲ್ಲವೆ?" ಎನ್ನುವಾಗ ಬಾಬಣ್ಣನ ಚೂರಿ ಜಮೀನುದಾರನ ಹೊಟ್ಟೆಯನ್ನು ಸೇರಿತು. 'ಅಯ್ಯೋ' ಎನ್ನುತ್ತಾ ಜಮೀನುದಾರ ನೆಲಕ್ಕೆ ಬಿದ್ದುಬಿಟ್ಟ.

"ಬೊಬ್ಬಿರುವಿಯಾ? ಸುಮ್ಮಗೆ ಬಿದ್ದುಕೊಂಡಿದ್ದರಾಯಿತು" ಎಂದು ಬಾಬಣ್ಣ ಗದರಿಸಿ ಹೊರಟ. ಆದರೆ ಜಮೀನುದಾರನೆದ್ದು ತನ್ನ ಮೇಲೇರಿ

ಬರಲೆತ್ನಿಸುವುದನ್ನು ನೋಡಿ ರೊಚ್ಚಿಗೆದ್ದ. ಮರಳಿ ಮತ್ತೊಮ್ಮೆ ಜಮೀನು ದಾರನ ಮೇಲೇರಿ ಹೋಗಿ ತಿವಿದು, ನೆಲಕ್ಕುರಿಳಿಸಿದ. ಆತನ ತಲೆಗೆ ಬಲವಾದ ಪೆಟ್ಟು ತಗಲಿತು. ಅಲ್ಲದೆ ನೆತ್ತರು ದೇಹದಿಂದ ಸೋರಿ ಹೋಗಿ ನಿತ್ರಾಣ ವಾದುದರಿಂದ ಪ್ರಜ್ಞಾಶೂನ್ಯನಾದ.

ಆ ಭೀಕರ ದೃಶ್ಯವು ಬಾಬಣ್ಣನ ಕಣ್ಣಿಗೆ ಕಟ್ಟಿ, ಅಸ್ಥಿರನನ್ನಾಗಿ ಮಾಡಿತು. ಈಗವನ ಸಿಟ್ಟಿನಾವೇಶ ಇಳಿದಿದೆ. ತಾನೇನು ಮಾಡಿದೆನೆಂಬುದರ ಅರಿವಾಗಿದೆ. ಇನ್ನು ತಾನಿಲ್ಲಿ ಹೆಚ್ಚು ಸಮಯ ನಿಲ್ಲುವುದು ಸರಿಯಲ್ಲ, ನಿಂತರೆ ತೊಂದರೆ ಯಾಗದಿರದೆಂದು ಹೊರಡಲನುವಾದ. ಹೊರಗೆ ಜನರು ಮಾತಾಡುವ ಶಬ್ದ ಕೇಳಿಸಿತು. ಹಿಂದಿನ ಬಾಗಿಲಿನಿಂದ ಓಡಿಹೋದ, ಕತ್ತಲೆಯಲ್ಲಿ ಮರೆಯಾದ.

ಮರುದಿನ, "ನಿನ್ನೆ ರಾತ್ರಿ ರಜಕಾರರು ಜಮೀನುದಾರನನ್ನು ಕೊಂದು, ಮನೆಯಲ್ಲಿದ್ದುದನ್ನೆಲ್ಲ ಸುಲಿಗೆಮಾಡಿ ದೋಚಿ ಕೊಂಡೊಯ್ದಿದ್ದಾರೆ" ಎಂಬ ವಾರ್ತೆ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು!



# ಕಲಾಕಾರ

**ನಾಗೇಶ ಶಾನಭೋಗ**

"ಕಲಾಕಾರ ಗೋವಿಂದ ಕುಮಾರರು", "ಚಿತ್ರ ಕಲೆಯಲ್ಲಿಯೇ ಮಾರ್ಪಾಡು", "ನಾನು ಕಂಡ ಕಲಾಕಾರರು" ಎಂದು ಮುಂತಾಗಿ ಹಲವು ಪತ್ರಿಕೆಗಳಲ್ಲಿ ಹಲವು ತರಹದ ಪ್ರಶಂಸಾಪರ ಲೇಖನಗಳು. ಅದರೊಡನೆ ಗೋವಿಂದ ಕುಮಾರರ ಭಾವಚಿತ್ರ(Photo)ವೂ ಪ್ರಕಟವಾಗಿದ್ದಿತು. ಹಲವು ಕಡೆಗಳಿಂದ ಪಾರಿತೋಷಕಗಳು ಸಿಕ್ಕ ಉಲ್ಲೇಖಗಳೂ ಇದ್ದವು. ಆದರೆ?... ಎಂಬ ಪ್ರಶ್ನೆ ಗುರುದತ್ತನ ಮನದಲ್ಲಿಯೇ ಕಡೆಯುತ್ತಿತ್ತು. ಮನೆಯಲ್ಲಿ ಯಾರೂ ಇಲ್ಲ. ಒಬ್ಬನೇ ತಲೆತಗ್ಗಿಸಿ ಯೋಚಿಸುತ್ತಾ ಕುಳಿತಿದ್ದಾನೆ. ಮೂಲೆ ಯೊಂದರಲ್ಲಿ ಒಂದು ದೀಪ ಮಿಣಿಮಿಣಿ ಉರಿಯುತ್ತ ಮಂದ ಪ್ರಕಾಶ ಬೀರು ತ್ತಿತ್ತು. ಕಿಟಿಕಿಯ ಬಳಿಯಲ್ಲಿ ಒಂದು ಮೇಜು. ಅದರ ಮೇಲೆ ಕುಂಚ ಮೊದಲಾದ ಚಿತ್ರಕಲೆಯ ಸಾಹಿತ್ಯಗಳು ಹರಡಿ ಬಿದ್ದಿವೆ. ಮೂಲೆ ಮೂಲೆ ಯಲ್ಲಿ ಕಸ – ಸಾರಣೆಯಿಲ್ಲದೆ ಎಷ್ಟು ದಿನಗಳಾದವೋ! ಗುರುದತ್ತ ಎದ್ದು ನಿಂತು ಅತ್ತಿತ್ತ ಹೊರಳಿ ನೋಡಿದ. ಅರ್ಧ ಸಿದ್ಧವಾದ ಚಿತ್ರವೊಂದು ಕಣ್ಣಿಗೆ ಬಿತ್ತು. ಚೌಕಟ್ಟಿನ ಕೆಳಗೆ 'ಆರಾಧನೆ' ಎಂದು ಬರೆದಿತ್ತು. ನೆಟ್ಟ ಕಣ್ಣಿನಿಂದ ಚಿತ್ರವನ್ನೊಮ್ಮೆ ನೋಡಿದ. ಮತ್ತೆ ನಿಟ್ಟುಸಿರು ಬಿಟ್ಟ. ತಿರುಗಿ ಕುರ್ಚಿಯಲ್ಲಿ ಕುಳಿತ.

ಗುರುದತ್ತ ಕುಳಿತಲ್ಲಿಯೇ ನಕ್ಕ. ಆದರೆ ಆ ನಗೆ, ಆನಂದ ಹರ್ಷ ದಾಯಕವಾಗಿರಲಿಲ್ಲ. ಅದೊಂದು ತಿರಸ್ಕಾರದ ನಗೆ—ಉಪಹಾಸದ ನಗೆ. ಮನಸ್ಸಿನಲ್ಲಿಯೇ ಗೊಣಗಿದ: "ಗೋವಿಂದ ಕುಮಾರ ಪ್ರಸಿದ್ಧ ಚಿತ್ರಕಾರನಂತೆ! ಚಿತ್ರಕಲೆ ಎಂದರೇನು ಎಂಬುದನ್ನೇ ಅರಿಯದ ಮರುಳ ಪಾರಿತೋಷಕಗಳನ್ನು ಪಡೆಯುವ! ಸಿರಿವಂತನಂತೆ! ಮಾನವಂತನಂತೆ! ಆದರೆ ಆ ಮಾನ, ಆ

ಮರ್ಯಾದೆ ಒಬ್ಬನ ಕೃತಿಗಳನ್ನು ಕದ್ದು ತನ್ನವೆಂದು ಪ್ರಸಿದ್ಧಿಸುವಾಗ ಎಲ್ಲಿ ಮರೆಯಾಯಿತೊ? ಕಲಾ ಪ್ರೇಮಿಯಂತೆ! ದೀನ ಜನೋದ್ಧಾರಕನಂತೆ! ಅಲ್ಲ, ಅಲ್ಲ – ಬರಿ ಸೋಗು. ದೀನ ಜನರ ಕೊರಳಿಗೆ ಪಾಶ ಹಾಕುವವ. ಅಹುದು . . . ಅದಾಗ ನಾನು ಅವನಿಗೆ ನನ್ನ ಪತ್ರಗಳನ್ನು ಮಾರುತ್ತಿರಲಿಲ್ಲ, ಎಂದಿಗೂ ಕೊಡುತ್ತಿರಲಿಲ್ಲ. ಆದರೆ ಅಂದಿನ ಪರಿಸ್ಥಿತಿ . . . ಬರೇ ಆರುನೂರು ರೂಪಾಯಿ! ಆ–ರು–ನೂ–ರು ರೂ–ಪಾ–ಯಿ. ನನ್ನ ಚಿತ್ರಗಳಿಗೆ ಇಷ್ಟೇ ಬೆಲೆಯೆ? ಅವನಾರು ಬೆಲೆ ಕಟ್ಟುವುದಕ್ಕೆ? ಇಲ್ಲ . . . ಸಾವಿರ . . . ಹತ್ತು ಸಾವಿರ . . . ಇಲ್ಲ . . . ಸಾಲದು . . . ನನ್ನ ಹೃದಯದ ಮಿಡಿತ, ನನ್ನ ಒಡಲ ಮಾಯೆ ಅವನು ತಿಳಿಯಲಿಲ್ಲ. ಆದರೆ . . . ನಾನು ಎಲ್ಲವನ್ನೂ ಕಳಿದುಕೊಂಡೆ. ತಂದೆ ತಾಯಿಗಳನ್ನು ಬದುಕಿಸಿಕೊಳ್ಳಲಾಗಲಿಲ್ಲ. ವ್ಯರ್ಥ. ಇದೆಲ್ಲವೂ ವ್ಯರ್ಥ" ಎಂದು ಹುಚ್ಚನಂತೆ ಮನೆಯ ಹೊರಗೆ ಹೊರಟುಬಿಟ್ಟ. ಮನೆಯ ಹೊರಗೆ ಅಂಗಳದಲ್ಲಿ ನಿಂತು ಅತ್ತಿತ್ತ ಅಡ್ಡಾಡಿದ. ಆದರೆ ಶಾಂತಿಯಿಲ್ಲ. ಶಾಂತಿಯೆಲ್ಲಿಂದ ಬರಬೇಕು? ತಿರುಗಿ ಮನೆಯೊಳಕ್ಕೆ ಹೋಗಿ ಹಾಸಿಗೆ ಹಾಸಿ ಮಲಗಿದ. ಕಣ್ಣಿಗೆ ನಿದ್ದೆಯಿಲ್ಲ. ಆದರೂ ಮಲಗಿದ.

*  *  *  *

ಗುರುದತ್ತನಿಗೆ ಚಿಕ್ಕಂದಿನಿಂದಲೂ ಚಿತ್ರಕಲೆಯಲ್ಲಿ ಆಸೆ ಬಹಳ. ಶಾಲೆಯಲ್ಲಿ ಕಲಿಯುತ್ತಿದ್ದಾಗ ಪಾಟಿಯ ಮೇಲೆ ಮನ್ನಣೆ ತೋರಿದಂತೆ ಗೆರೆಯೆಳೆದು ಚಿತ್ರ–ವಿಚಿತ್ರ ಪ್ರಾಣಿಗಳನ್ನು ಬಿಡಿಸುತ್ತಿದ್ದ. ಶಾಲೆಯ ಶಿಕ್ಷಣ ಅವನಿಗೆ ಚೆನ್ನಾಗಿ ಸಿಗುತ್ತಿತ್ತು. ಆದರೆ ಆ ಶಿಕ್ಷಣದಲ್ಲಿ ಚಿತ್ರಕಲೆಗೆ ಉತ್ತೇಜನವಿರಲಿಲ್ಲ. ಗುರುದತ್ತ ಶಾಲೆಯಲ್ಲಿ ಚಿತ್ರಗಳನ್ನು ಬಿಡಿಸುತ್ತಿದ್ದಾಗ ಸಹಪಾಠಿಗಳು ಬಲು ತೊಂದರೆ ಕೊಟ್ಟು ಅವನ ಮನವನ್ನು ನೋಯಿಸಿದ್ದಾರೆ. ಮನೆಯಲ್ಲಿಯೂ ಹಾಗೆಯೇ. ತಂದೆಗೆ ಅದು ಕಂಡರಾಗದು. ಯಾಕೆಂದರೆ ಬಡವರಿಗೆ ಅದರಿಂದ ತುಸುವೂ ಪ್ರಯೋಜನವಿಲ್ಲವೆಂದು ಅವರ ಮತ. ಸಂಸಾರಕ್ಕೆ ಅವಶ್ಯಕವಾದ ಇನ್ನಿತರ ಕಲೆಗಳಿಗೆ ಉತ್ತೇಜನವೀಯುತ್ತಿದ್ದರು. ಗುರುದತ್ತನಲ್ಲಿಯ ಆ ಆಕಾಂಕ್ಷೆ ಮತ್ತು ಆ ಆತುರ ಯಾವದೇ ರೀತಿಯಿಂದ ತಡೆಯಲಿಲ್ಲ. ಊರ ಯಾವ ಮೂಲೆಯಲ್ಲಿ ಕಲಾಪ್ರದರ್ಶನವಾದರೂ ತಂದೆಗೆ ತಿಳಿಯದಂತೆ ಹೋಗಿ ನೋಡಿ ಬರುವ. ಮನೆಗೆ ಬಂದವನೇ ಅಲ್ಲಿಯ ಚಿತ್ರಗಳನ್ನು ನೆನೆದು ಹಾಳೆಯ ಮೇಲೆ ಚಿತ್ರಿಸಲು ಹವಣಿಸುತ್ತಿದ್ದ.

ಶಾಲಾ ಜೀವನ ಕಳೆಯಿತು. ಮೆಟ್ರಿಕ್ ಪರೀಕ್ಷೆಯಲ್ಲಿ ಯಶಸ್ವೀ ರೀತಿಯಲ್ಲಿ ಪಾಸಾದ. ಹೈಸ್ಕೂಲಿನಲ್ಲಿ ಶಿಕ್ಷಕರ ಉತ್ತೇಜನ ದೊರೆತ ಮೂಲಕ ಅವನಲ್ಲಿಯ ಕಲೆಯ ಪ್ರಗತಿಗೆ ಅವಕಾಶವಾಯಿತು. ಆಗಾಗ್ಗೆ ವೇಳೆ ಸಿಕ್ಕಾಗಲೆಲ್ಲ ಚಿತ್ರಗಳನ್ನು ಬರೆದು ಶಿಕ್ಷಕರಿಗೆ ತೋರಿಸುತ್ತಿದ್ದ. ಅವರು ಇವನ ಚಿತ್ರಕಲೆಯನ್ನು ಬಹುವಾಗಿ ಮೆಚ್ಚಿದರು. ಒಮ್ಮೆ ಹಿರಿಯ ಪಾರಿತೋಷಕವೂ ಗುರುದತ್ತನ ಪಾಲಿಗೆ ಬಂತು. ಅಂದು ಅವನಿಗೆ ತುಸು ಧೈರ್ಯ ಬಂದಿತು. ತಂದೆ–ತಾಯಿಗಳಿಗೆ ಆ ಚಿತ್ರವನ್ನು ತೋರಿಸಿದ. ಚಿತ್ರ ನೋಡಿ ಅವರಿಗೆ ಆಶ್ಚರ್ಯವೂ ಆಯಿತು—ಆನಂದವೂ ಆಯಿತು. "ನಮ್ಮ ಗುರುದತ್ತ ಬಿಡಿಸಿದ್ದೇ? ನಮ್ಮ ಕಲ್ಪನೆಯೇ ಇರಲಿಲ್ಲ" ಎಂದು ಉದ್ಗಾರ ತೆಗೆದರಷ್ಟೆ. ಮುಂದಣ ಉತ್ತೇಜನೆಯ ಮಾತಿಲ್ಲ. ಅದಕ್ಕೆ ಕಾರಣ ಅವರ ಬಡತನ.

ಹೈಸ್ಕೂಲಿನ ಶಿಕ್ಷಕರೆಲ್ಲ ಗುರುದತ್ತನ ತಂದೆಯ ಮನವೊಲಿಸಿದರು. ಹೀಗಾಗಿ ಗುರುದತ್ತನಿಗೆ ಚಿತ್ರಕಲಾಶಾಲೆಗೆ (Art School) ಪ್ರವೇಶ ಸಿಕ್ಕಿತು. ಅಲ್ಲಿಯೂ ಜನ ಇವನ ಕಲೆಯನ್ನು ಮೆಚ್ಚಿದರು. ಅದರ ಫಲವಾಗಿ ವಿದ್ಯಾರ್ಥಿ ವೇತನವೂ ಸಿಕ್ಕಿತು. ಅದೇ ಅವನ ಶಿಕ್ಷಣದ ಭಾರವನ್ನು ಹಗುರು ಮಾಡಿತು. ಮೂರು ವರ್ಷಗಳ ಕಾಲ ಕಲಿತು, ಕೊನೆಗೆ ಪ್ರಶಸ್ತಿ ಪತ್ರ (Certificate) ವನ್ನು ಪಡೆದು ಮನೆಗೆ ಮರಳಿದ.

ಆದರೆ ಮನೆಯ ಸ್ಥಿತಿ ಮುಂಚಿನಂತಿರಲಿಲ್ಲ. ಗುರುದತ್ತನ ತಂದೆ ಮುದುಕನಾಗುತ್ತ ಬಂದಿದ್ದ. ದೃಷ್ಟಿ ಮಂದವಾಗುತ್ತ ಬಂದಿತ್ತು. ಹೀಗಾಗಿ ಅವನ ಕೈಯಿಂದ ಅಪ್ಪಿ ತಪ್ಪಿ ತಪ್ಪುಗಳು ಆಗುತ್ತಿದ್ದವು. ಆದರೆ ಕೆಲಸಕ್ಕಿಟ್ಟು ಕೊಂಡವರು ಇದನ್ನೆಲ್ಲ ಗಮನಿಸುವರೆ? ಕೆಲಸದಿಂದ ತೆಗೆದುಹಾಕಲಾಯಿತು. ಗಳಿಸುವ ಹಿರಿಯ ಆಳು ಮನೆಯಲ್ಲಿ ಕೂತಮೇಲೆ ನಿರ್ವಾಹ ಸಾಗಬೇಡವೇ? ಕೆಲದಿನಗಳ ತನಕ ಅಂಚೆ ಕಚೇರಿಯ ಎದುರು ಕುಳಿತು ಬರೆಹ ಬಾರದವರಿಗೆ ಪತ್ರವನ್ನೊ ಚೀಟಿಯನ್ನೊ ಬರೆದುಕೊಟ್ಟು ಸಂಸಾರ ಸಾಗಿಸಿದ್ದಾಯಿತು. ಅತ್ತ ಗುರುದತ್ತನ ತಾಯಿಗೂ ನೆರೆಮನೆಯವರಲ್ಲಿ ದುಡಿಯಬೇಕಾಯಿತು.

ಗುರುದತ್ತ ಮನೆಗೆ ಮರಳುತ್ತಲೇ ತಂದೆ ಮಗನನ್ನು ಕರೆದು, "ಮಗೂ, ನೀನೆಲ್ಲ ಬಲ್ಲವನೇ. ಇಲ್ಲಿಯ ಪರಿಸ್ಥಿತಿಯೆಲ್ಲವನ್ನೂ ನೋಡುತ್ತಿರುವೆ. ಈ ಮುದುಕಪ್ರಾಯದಲ್ಲಿ ನಾನು ಹೊಟ್ಟೆಗಾಗಿ ಕಷ್ಟಪಡಬೇಕಾಗಿದೆ. ಇದು ನನ್ನ ದುಡಿಯುವ ವಯಸ್ಸೇ? ಇದೀಗ ನೀನು ಗಳಿಸಬೇಕಾಗಿತ್ತು. ಆದರೆ ನೀನು

ಇನ್ನೂ ನೌಕರಿ ಹುಡುಕುತ್ತಿರುವಂತೆಯೇನೂ ತೋರುವದಿಲ್ಲ. ನೀನು ಮೆಟ್ರಿಕ್ ಪರೀಕ್ಷೆಯಂತೂ ಪಾಸಾಗಿರುವೆ. ವಯಸ್ಸೂ ಬಹಳವಾಗಿಲ್ಲ. ಖಂಡಿತ ಯಾವುದಾದರೂ ಕೆಲಸ ಸಿಗಬಹುದು. ನೀನೇ ನಮ್ಮ ವಂಶೋದ್ಧಾರಕ. ನಾವೇನೂ ನಿನ್ನ ಕೆಡಕನ್ನು ಇಚ್ಛಿಸುವದಿಲ್ಲ. ನೀನು ಕಲಿತ ಕಲೆಯೇನೂ ಕೊಳೆತು ಹಾಳಾಗಿ ಹೋಗುವದಿಲ್ಲ. ಚನ್ನಾಗಿ ಯೋಚಿಸಿ ನೋಡು" ಎಂದು ಮುಂತಾದ ಬುದ್ಧಿವಾದ ಹೇಳಿದರು.

ಗುರುದತ್ತ ತುಂಬಾ ಯೋಚಿಸಿದ, ಆದರೆ ಯಾವ ನಿರ್ಧಾರಕ್ಕೂ ಬರಲಿಲ್ಲ. ಇತ್ತ ತಂದೆಯಾಡಿದ್ದು ದಿಟವೆಂದು ತೋರುವದು. ಅತ್ತ ಕಲೆಯ ಅಭಿಮಾನ ತಲೆತಗ್ಗಿಸ ಕೊಡುವದಿಲ್ಲ. ಇಷ್ಟು ದಿನ ಸಂಸಾರ ಸಮುದ್ರದ ಕಡೆ ಲಕ್ಷ್ಯವನ್ನೇ ಇತ್ತಿರಲಿಲ್ಲ. ಆದರೆ ಇಂದು ತಂದೆಯವರು ಸನ್ನಹಕ್ಕೆ ಆಜ್ಞೆಯಿತ್ತಿದ್ದಾರೆ. "ನನ್ನ ಕಲೆಯನ್ನು ಹೊಟ್ಟೆಯ ಪಾಡಿಗಾಗಿ ಬಲಿ ಕೊಡುವದೇ?" ಎಂಬ ಯೋಚನೆಗೊಳಗಾದ.

ಅದೇ ಹೊತ್ತಿಗೆ 'ಚಿತ್ರಕಲಾ ಪ್ರದರ್ಶನವಿದೆ' ಎಂಬ ಜಾಹೀರಾತನ್ನು ಪತ್ರಿಕೆಯೊಂದರಲ್ಲಿ ಓದಿದ. ಚಿತ್ರಕಲಾ ಪ್ರದರ್ಶನಕ್ಕೆ ತನ್ನ ಚಿತ್ರಗಳನ್ನು ಕಳಿಸಬೇಕೆನಿಸಿತು ಅವನಿಗೆ. ತನ್ನ ಹತ್ತಿರ ಇದ್ದಬಿದ್ದದನ್ನೆಲ್ಲ ಮಾರಿ ತನಗೆ ಬೇಕಾದ ಸಾಹಿತ್ಯಗಳನ್ನು ಒದಗಿಸಿಕೊಂಡ. ಮತ್ತೆ ಚಿತ್ರಗಳನ್ನು ಬರೆಯಲು ಪ್ರಾರಂಭಿಸಿದ. ಹತ್ತು-ಹದಿನೈದು ದಿನಗಳ ತನಕ ಊಟ ನಿದ್ರೆಗಳ ಪರಿವೆಯಿಲ್ಲ. ಬೆಳಗು ಮುಂಜಾನೆಯೆದ್ದು ಬಳಿಯ ಗುಡ್ಡಕ್ಕೆ ಹೋಗಿ ನೋಡುತ್ತ ನಿಲ್ಲುವ. ಒಮ್ಮೊಮ್ಮೆ ಸಂಗಾತ ಸಾಹಿತ್ಯವನ್ನು ತಂದು, ಅಲ್ಲಿಯೇ ಚಿತ್ರದ ರೂಪರೇಖೆಗಳನ್ನಿಡುತ್ತಿದ್ದ. ಸಂಜೆ ಸೂರ್ಯ ಮುಳುಗುವಾಗ ಹೊಳೆಯ ದಡಕ್ಕೆ ಹೋಗಿ ನಿಲ್ಲುವ. ದಾರಿಯಲ್ಲಿ ಹೋಗುವಾಗ ಇಬ್ಬದಿಯಲ್ಲಿಯೂ ಕಣ್ಣಿಟ್ಟು ನೋಡುತ್ತ ಹೋಗುವ. ಬೀಸುವ ಗಾಳಿ, ಹಾರುವ ಎಲೆ ಈ ರೀತಿ ಪ್ರತಿಯೊಂದನ್ನು ದಿಟ್ಟಿಸಿ ನೋಡುವ. ರಾತ್ರೆ ಮನೆಗೆ ಬಂದು ದೀಪದ ಮುಂದ ಪ್ರಕಾಶದಲ್ಲಿ ಬಣ್ಣಬಳಿದು ಸಿದ್ಧಮಾಡುವ. ಹಲವು ಸಲ ಚಿತ್ರ ಬರೆಯುವಾಗ ಕಣ್ಣೀರಿಟ್ಟು ಸಮಾಧಿ ಹೋಗುತ್ತಿದ್ದ. ಈ ರೀತಿ ಚಿತ್ರಗಳು ಸಿದ್ಧವಾದವು.

ಚಿತ್ರಕಲಾ ಪ್ರದರ್ಶನದ ಕಾರ್ಯದರ್ಶಿಗೆ ಭೇಟಿಯಾದ. ಅವನೊಬ್ಬ ಹೆಮ್ಮೆಯ ಮೂರ್ತಿ. ಮಾತನಾಡಿಸಲೂ ವೇಳೆಯಿಲ್ಲವೆಂದು ಹಿಂದಿರುಗಿ ಕಳುಹಿದ. ಸತತ ಮೂರು ದಿನ ಪ್ರಯತ್ನ ಮಾಡಿ, ಕಾರ್ಯದರ್ಶಿಯ ಮನ

ವ್ರೊಲಿಸಿದ. ಮತ್ತೆ ತನ್ನೊಡನೆ ತಂದ ಆರೇಳು ಚಿತ್ರಗಳನ್ನು ಪ್ರದರ್ಶನಕ್ಕಾಗಿ ಇಟ್ಟ. ಮತ್ತೆ ನಿರ್ಣಯಕ್ಕೆ ಕಾಯುತ್ತ ಮನೆಯಲ್ಲಿಯೇ ಉಳಿದ.

ಇತ್ತ ಮನೆಯಲ್ಲಿ ತಂದೆತಾಯಿಗಳ ದೇಹಾರೋಗ್ಯ ಕೆಡುತ್ತ ನಡೆದಿತ್ತು. ಕೆಮ್ಮು, ತುಸು ಜ್ವರ— ಈ ರೀತಿ ತಂದೆಗೆ. ಕಾಲು ಒಡೆತ, ತಲೆ ನೋವು— ಈ ರೀತಿ ತಾಯಿಗೆ. ಕೆಲವು ದಿನ ತಾಯಿಯ ಕೈ ಸಾಗದೆ ಗುರುದತ್ತನೇ ಸ್ವತಃ ಅಡಿಗೆ ಮಾಡಿ ಹಾಕಬೇಕಾಯಿತು. ಬೇರೆ ಯಾವ ಕೆಲಸಗಳೂ ಇರದ್ದ ರಿಂದ ತಂದೆ-ತಾಯಿಗಳ ಸೇವೆ ಮನಸಾರೆ ಮಾಡುತ್ತಿದ್ದ. ಅತ್ತಿತ್ತ ಅಡ್ಡಾಡಿ ದಿನವೂ ನಾಲ್ಕೆಂಟಾಣೆ ಸಂಪಾದಿಸುತ್ತಿದ್ದ. ತಂದೆ–ತಾಯಿಗಳಿಗೆ ಕೊಡುತ್ತಿದ್ದ. ಈ ರೀತಿ ಉಪಚಾರ ನಡೆದಿತ್ತು.

ಭಾರತಿ ನೆರೆಮನೆಯ ಹುಡಿಗಿಯೊಬ್ಬಳು. ಹದಿನೈದು–ಹದಿನಾರು ವರ್ಷ ಪ್ರಾಯದವಳಿರಬೇಕು. ಮನೆಯಲ್ಲಿ ತುಂಬ ಇದ್ದವರೇ. ಯಾವುದರ ಕೊರ ತೆಯೂ ಇರಲಿಲ್ಲ. ಅವಳಿಗೆ ಚಿತ್ರಕಲೆಯಲ್ಲಿ ತುಂಬಾ ಪ್ರೀತಿ. ದಿನವೂ ಗುರುದತ್ತನಿಂದ ಶಿಕ್ಷಣ ಪಡೆದುಕೊಳ್ಳುತ್ತಿದ್ದಳು. ಗುರುದತ್ತನ ಚಿತ್ರಕಲೆ ಯನ್ನು ತುಂಬಾ ಮೆಚ್ಚಿದ್ದಳು. ನಿರ್ಭೀತತನದಿಂದ ಗುರುದತ್ತನಿಗೆ ಅವನ ಕುಂದುಗಳನ್ನು ತೋರಿಸಿಕೊಡುತ್ತಿದ್ದಳು. ಅವಳಿಗೆ ತನ್ನ ಸಿರಿವಂತಿಗೆಯ ಬಗ್ಗೆ ತುಸುವೂ ಹೆಮ್ಮೆಯಿರಲಿಲ್ಲ. ಆಗಾಗ್ಗೆ ಗುರುದತ್ತ ಮನೆಯಲ್ಲಿ ಇರದಾಗ ಬಂದು ಅವನ ತಂದೆ–ತಾಯಿಗಳ ಸೇವೆ ಮಾಡುತ್ತಿದ್ದಳು. ಗುರುದತ್ತನಿಗಿದ್ದ ತೀರ ಸನಿಯದ ಹಿತಚಿಂತಕರೆಂದರೆ ಅವಳೊಬ್ಬಳೇ. ಅವಳ ನಿಸ್ವಾರ್ಥ ಬುದ್ಧಿ ಯನ್ನು ಕಂಡು ಗುರುದತ್ತ ಮೆಚ್ಚಿದ್ದ.

ಕಲಾ ಪ್ರದರ್ಶನದ ಮುಂಚಿನ ರಾತ್ರಿ ಭಾರತಿ ಗುರುದತ್ತನ ಮನೆಗೆ ಬಂದಳು.

"ಗುರುದತ್ತ, ನಿಮ್ಮ ಚಿತ್ರಗಳನ್ನು ಪ್ರದರ್ಶನಕ್ಕಾಗಿ ಕೊಟ್ಟು ಬಂದಿರಾ? ಇಲ್ಲವೆ ನಿಮ್ಮ ಸಂಕೋಚ ವೃತ್ತಿಯಿಂದ ಇಲ್ಲೇ ಇಟ್ಟುಕೊಂಡಿರುವಿರಾ? ನಾನು ನಿಮಗೆ ಬಹುವಾಗಿ ಹೇಳಿದ್ದೇನೆ. ನನಗಾಗಿಯಾದರೂ ಪ್ರದರ್ಶನಕ್ಕೆ ಇಡಲೇಬೇಕು."

"ಭಾರತಿ, ನಿನ್ನ ಮಾತಿನಂತೆ ನೀನೇ ಆರಿಸಿದ ಆರು ಚಿತ್ರಗಳನ್ನು ಪ್ರದರ್ಶನಕ್ಕೆ ಕೊಟ್ಟು ಬಂದಿದ್ದೇನೆ. ಆದರೆ, ಭಾರತಿ, ಪ್ರದರ್ಶನ ನಮ್ಮದಲ್ಲ. ಸಿರಿವಂತ ಕಲಾಕಾರರದು."

"ಗುರುದತ್ತ, ಕಲೆಯಲ್ಲಿ ಬಡತನ—ಸಿರಿವಂತಿಗೆ ಇದೆಯೇ?"

"ಅದೆಲ್ಲ ನಾನರಿಯೆ. ನಾನು ಕಾರ್ಯದರ್ಶಿಯನ್ನು ಕಾಣಹೋದಾಗ ಎರಡು ದಿನ ದರ್ಶನವಿಲ್ಲದೆ ಹಿಂದಿರುಗಬೇಕಾಯ್ತು. ಕೊನೆಗೆ ನನ್ನೊಬ್ಬ ಗೆಳೆಯನ ಚೀಟಿ ಪಡೆದು ಅವರನ್ನು ಕಂಡೆ. ನನಗೆ ಪರಿಣಾಮದಲ್ಲಿ ಹುರುಪಿಲ್ಲ."

"ಗುರುದತ್ತ, ಖಂಡಿತ ನಿಮಗೇ ಪಾರಿತೋಷಕ ಸಿಗಬೇಕು. ಇದರಲ್ಲಿ ಸಂದೇಹವಿಲ್ಲ. ಹಾಗಿಲ್ಲದಿದ್ದರೆ ಅವರು ನಿಜವಾದ ಕಲೋಪಾಸಕರಲ್ಲ. ಅದು ಬರೀ ಸೋಗು."

"ಭಾರತಿ, ನಮ್ಮಂತಹ ಬಡ ಕಲಾಕಾರರಿಗೆ ತಲೆಯೆತ್ತಲು ಅನುವಿದೆಯೇ? ಏನು ಆಗುವುದೋ ಆಗಲಿ. ಇರು, ನೀನು ಚಿಂತಿಸಬೇಡ. ರಾತ್ರಿಯಾಯಿತು. ಮನೆಗೆ ನಡೆ" ಎಂದು ಭಾರತಿಯನ್ನು ಅವಳ ಮನೆಗೆ ಕಳುಹಿದ.

ಇಂದು ಚಿತ್ರಕಲಾ ಪ್ರದರ್ಶನದ ದಿನ. ಶಾಲಾ ಮಂದಿರದ ಬಾಗಿಲನ್ನು ತಳಿರು–ತೋರಣಗಳಿಂದ ಚನ್ನಾಗಿ ಅಲಂಕರಿಸಿದ್ದರು. ಮಂದಿರದ ಮುಂದೆ ಹಲವು ಕಾರುಗಳು ನಿಂತಿದ್ದವು. ಜನಸಮ್ಮರ್ದ ಹೇಳತೀರದು. ಒಳಕ್ಕೆ ಹೋಗಲು ದಾರಿಯೇ ಕಟ್ಟಿದಂತಿತ್ತು. ವ್ಯವಸ್ಥಾಪಕರ ಕಾರ್ಯಕ್ಷಮತೆಯಿಂದ ಉದ್ಘಾಟನಾ ಸಮಾರಂಭವು ಸಾಂಗವಾಗಿ ನೆರವೇರಿತು. ಸಾಲಾಗಿ ಜನ ಬಂದು ಇರಿಸಿದ ಚಿತ್ರಗಳನ್ನು ನೋಡುತ್ತ ಇನ್ನೊಂದು ಕಡೆಯಿಂದ ಶಿಸ್ತಿನಿಂದ ಮರಳುತ್ತಿದ್ದರು. ಅಲ್ಲಿಯ ಸ್ವಯಂಸೇವಕರು ಚಿತ್ರಕಾರರ ಹೆಸರನ್ನು ಓದಿ ಹೇಳಿ, ಅವರಿಗೆ ಕಂಡಂತೆ ಚಿತ್ರದಲ್ಲಿ ಸೂಚಕವಾದ ಭಾವನೆಯನ್ನು ಹೇಳುತ್ತಿದ್ದರು.

ಮೂರು ದಿನಗಳ ತನಕ ಪ್ರದರ್ಶನ ತೆರೆದಿತ್ತು. ಆದರೆ ಎಲ್ಲರೂ ಹೋಗಿ ನೋಡುವಂತಿರಲಿಲ್ಲ. ಪ್ರವೇಶಕ್ಕೆ ೫ ರೂ. ರೊಕ್ಕ ತೆರಬೇಕಾಗಿತ್ತು. ಗುರುದತ್ತ ಚಿತ್ರಕಾರನಾಗಿಯೂ ನೋಡಲು ಹೋಗಲಿಲ್ಲ. ಆದರೆ ಭಾರತಿ ತಪ್ಪದೆ ಹೋಗಿ ನೋಡಿ ಬಂದಳು. ನೋಡಿ ಮನೆಗೆ ಮರಳುವಾಗ ಅವಳಿಗೆ ಆದ ಆನಂದ ಹೇಳತೀರದು. ಪ್ರದರ್ಶನಕ್ಕಿಟ್ಟ ಚಿತ್ರಗಳಲ್ಲಿ ಗುರುದತ್ತನ ಚಿತ್ರಗಳೇ ಅತ್ಯುತ್ತಮವಾಗಿ ತೋರಿದವು ಅವಳಿಗೆ. ಆದರೆ ಸ್ವಯಂಸೇವಕರು ಬಾಯಿಗೆ ಬಂದಂತೆ ಅದರೊಳಗಿನ ಭಾವನೆ ಹೇಳಿ ಅವುಗಳ ಮಹರೆಯನ್ನು ಕೆಡಿಸಿದರು. ಆದರೂ ಗುರುದತ್ತನಿಗೇ ಪಾರಿತೋಷಕ ಸಿಕ್ಕೀತೆಂಬ ಭರವಸೆ ಅವಳಿಗಿತ್ತು.

ಎಂಟು ದಿನ ಕಳೆದವು. ಭಾರತಿ – ಗುರುದತ್ತರಿಬ್ಬರೂ ಪರಿಣಾಮಕ್ಕಾಗಿ ಕಾದು ನಿಂತರು. ಆದರೆ ಗುರುದತ್ತನಿಗ ನಂಬಿಕೆಯಿರಲಿಲ್ಲ. ಕೊನೆಗೆ ಪರಿಣಾಮ ಬೆಳಕಿಗೆ ಬಂದಿತು. ಅದರಲ್ಲಿ ಗುರುದತ್ತನ ಹೆಸರೇ ಇಲ್ಲ!

ಗುರುದತ್ತನಿಗೆ ಆದ ದುಃಖಕ್ಕೆ ಮಿತಿಯಿಲ್ಲ. ಆದರೂ ತಡೆದುಕೊಂಡು ಸಮಾಧಾನದಿಂದ ಉಳಿದ. ಅತ್ತ ಭಾರತಿಯೂ ಬಹು ಖಿನ್ನವಾಗಿದ್ದಳು. ತಾನು ಸಿರಿವಂತರ ಮಗಳು. ಮತ್ತೆ ಸಿರಿವಂತರೇ ಗುರುದತ್ತನ ಮಾನಭಂಗ ಮಾಡಿದ್ದರು. ಹೀಗಾಗಿ ಗುರುದತ್ತ ತನ್ನನ್ನು ಕಾಣಬಯಸಲಿಕ್ಕಿಲ್ಲವೆಂದು ಕೊರಗುತ್ತ ಮನೆಯಲ್ಲಿಯೆ ಉಳಿದಳು. ಆದರೆ ನಾಲ್ಕನೆಯ ದಿನ ಮನೆಯಲ್ಲಿ ಕುಳಿತಿರಲಾಗದೆ ಗುರುದತ್ತನಿದ್ದಲ್ಲಿಗೆ ಹೋದಳು.

ಗುರುದತ್ತ ಭಾರತಿಯನ್ನು ಕಾಣುತ್ತಲೆ—"ಏನು ಭಾರತಿ ಬರಲೇ ಇಲ್ಲವಲ್ಲ?"

"ಬರಲಾಗಲಿಲ್ಲ, ಕೆಲಸವಿತ್ತು."

"ಸುಳ್ಳಾಡುವೆ! ಸಿರಿವಂತರ ನಡೆವಳಿಕೆ ನೋಡಿ ನಿನ್ನ ಮನ ನೊಂದಿರ ಬೇಕು. ಯಾರೋ ಏನೋ ಮಾಡಿದರೆಂದು ನಾನು ನಿನ್ನ ಮೇಲೆ ರೇಗಲೆ? ನೀನು ಸಿರಿವಂತರ ಮನೆಯವರಾದರೇನಾಯ್ತು? ನೀನು ಅಂತಹವಳಲ್ಲ. ನಾನು ನಿನ್ನನ್ನು ಚೆನ್ನಾಗಿ ಬಲ್ಲೆ."

"ಇನ್ನೊಂದು ಸಲ ನೋಡುವ ಧೈರ್ಯಗೆಡಬೇಡ" ಎಂದು ಸಾಂತ್ವನ ಮಾಡಹೋದಳು.

"ಏನು ಧೈರ್ಯಗೆಡದಿರುವುದೇ! ನೀನು ನೋಡುತ್ತಿರುವೆ. ಸುಮ್ಮನೆ ಕೆಲಸವಿಲ್ಲದೆ ನಾನು ಮನೆಯಲ್ಲಿ ಕೂತಿದ್ದೇನೆ. ತಂದೆ-ತಾಯಿಗಳಿಬ್ಬರೂ ಜಡ್ಡು. ಅವರ ಆರೈಕೆ ಹೇಗೆ ಸಾಗಬೇಕು? ಔಷಧೋಪಚಾರವಾಗಬೇಕು. ಅದಕ್ಕೆ ಹಣ ಬೇಡವೇ? ನಮ್ಮ ಕಲಾಕಾರರ ಗತಿಯೇ ಹಾಗೆ."

"ಪ್ರಪಂಚವೇ ಹೀಗೆ. ಗುರುದತ್ತ ಇನ್ನು ಸಾಕು. ನೌಕರಿಯನ್ನಾದರೂ ಹುಡುಕಲು ಹೋಗಿರಿ. ನಾನು ನನ್ನ ಕೈಲಾದ ಮಟ್ಟಿಗೆ ಸಹಾಯ ಮಾಡುವೆ."

"ಅದಿರಲಿ" ಎಂದ ಗುರುದತ್ತ. ಆ ಕಡೆ ಲಕ್ಷ್ಯವೀಯಲಿಲ್ಲ. ಭಾರತಿ ಮನೆಗೆ ಮರಳಿದಳು."

ಮರುದಿನ ಗುರುದತ್ತನ ಮನೆಗೆ ಓರ್ವ ಸಿರಿವಂತ ಸಭ್ಯ ಗೃಹಸ್ಥರ ಆಗಮನವಾಯಿತು. ಗುರುದತ್ತ ತುಸು ಅಚ್ಚರಿಯಿಂದಲೇ ಸ್ವಾಗತಿಸಿದ.

ಮತ್ತೆ ಕುರ್ಚಿಯಲ್ಲಿ ಕುಳ್ಳಿರಿಸಿದ. ಚಹಾಪಾನವೂ ಆಯಿತು. ಆಮೇಲೆ ಮಾತಿಗೆ ಮೊದಲಾಯಿತು.

"ಗುರುದತ್ತ ಇಂದಿನ ಕಲಾಪ್ರದರ್ಶನವಾಯಿತಲ್ಲಾ. ಆಗ ನಿನ್ನ ೫-೬ ಅತ್ಯುತ್ತಮ ಚಿತ್ರಗಳನ್ನು ನೋಡಿದೆ. ನಿಜವಾಗಿಯೂ ಅವಕ್ಕೇ ಪುರಸ್ಕಾರ ಸಿಗಬೇಕಾಗಿತ್ತು. ನಿರ್ಣಯಕರ ತೀರ್ಪು ನನಗೆ ಮಾನ್ಯವಿಲ್ಲ ನೋಡು."

"ಅದೆಲ್ಲ ಇರಲಿ; ಅದೆಲ್ಲ ಆಗಿಹೋದ ಮಾತು. ಇನ್ನು ಮಾತನಾಡಿ ಫಲ ವಿಲ್ಲ. ತಾವು ಬಂದ ಕಾರ್ಯವೇನು? ಹೇಳಿ" ಎಂದು ವಿಮನಸ್ಕನಾಗಿ ನುಡಿದ.

"ಹೀಗೆಯೇ ತಿರುಗಾಡುತ್ತ ಬಂದೆ ಈ ಊರ ಆಚೆಯೇ ನನ್ನ ಬಂಗಲೆ. ಗೋವಿಂದ ಕುಮಾರರು ಎಂದರೆ ಎಲ್ಲರೂ ಬಲ್ಲರು. ನನಗೆ ಚಿತ್ರಕಲೆಯೆಂದ ರಾಯಿತು. ಹಲವು ಕಲಾಕಾರರಿಂದ ಚಿತ್ರಗಳನ್ನು ಕೊಂಡು ಮನೆಯೆಲ್ಲಾ ತುಂಬಿದ್ದೇನೆ. ನನಗೊಂದು ಹುಚ್ಚು."

"ನಿಮ್ಮಂತಹರಿಗೆ ಕಲಾ ಪ್ರೇಮವಿರಬೇಕಾದುದೇ."

"ನೋಡು, ಗುರುದತ್ತ ನಾನು ಬಂದುದು ನಿನ್ನ ಚಿತ್ರಗಳನ್ನು ಕೊಂಡು ಕೊಳ್ಳಲು."

"ಆದರೆ ನಾನು ನನ್ನ ಚಿತ್ರಗಳನ್ನು ಮಾರಲು ಸಿದ್ಧನಿಲ್ಲ."

"ಯಾಕೆ?"

"ಇಲ್ಲ."

"ನಿನ್ನ ಮನೆಯ ಸ್ಥಿತಿಯು ಚೆನ್ನಾಗಿಲ್ಲವೆಂದು ಕೇಳುವೆ. ನಿನಗೆ ಸಹಾಯ ಮಾಡಿದಂತಾದೀತು ಎಂದು ನನ್ನ ಮತ. ಈ ಸುಸಂಧಿಯನ್ನು ಕಳಕೊಳ್ಳು ವಿಯಾ?"

"ಏನು ಸುಸಂಧಿಯೋ? ನಾನು ಕೇಳಿದಷ್ಟು ಬೆಲೆ ಕೊಡುವಿರಾ?"

"ಓಹೋ ಕೊಡುತ್ತೇನೆ."

"ಹಾಗಾದರೆ ನೋಡಿ ಇಲ್ಲಿ ಇಟ್ಟ ಚಿತ್ರಗಳನ್ನು" ಎಂದು ತೋರಿಸಿದ. ಗೋವಿಂದ ಕುಮಾರರು ಆರು ಚಿತ್ರಗಳನ್ನು ಆರಿಸಿಕೊಂಡರು. ಮತ್ತೆ "ಇವಕ್ಕೆ ಬೆಲೆಯೇನು?" ಎಂದು ಕೇಳಿದರು.

"ಬೆಲೆಯೇ? ಸಾವಿರ."

"ಅದಾಗದು. ಆರು ನೂರು ಕೊಡುವೆ" ಎಂದು ನೂರು ರೂಪಾಯಿ ಗಳ ಆರು ನೋಟುಗಳನ್ನು ಕೈಗೆ ತೆಗೆದುಕೊಂಡರು.

ಗುರುದತ್ತನಿಗೆ ಮಾತನಾಡಲು ಬಾಯಿ ಬರಲಿಲ್ಲ. ಮನೆಯಲ್ಲಿ ಒಂದು ದುಡ್ಡು ಬೇಕೆಂದರೆ ಇಲ್ಲ. ತಂದೆ ತಾಯಿಗಳಿಗೆ ದುಡ್ಡು ಇನ್ನೆಲ್ಲಿ? ತಾನು ಕೇಳಿದ ಬೆಲೆ ಸಿಕ್ಕೀತು? ಸಿರುಪಾಯ.

"ಆಗಬಹುದು" ಎಂದು ಸ್ವೀಕರಿಸಿದ. ಆದರೆ ಅವನ ಮುಖಭಾವ ತೃಪ್ತಿಯನ್ನು ತೋರುತ್ತಿರಲಿಲ್ಲ. ಗೋವಿಂದ ಕುಮಾರರು ಸಮಯೋಚಿತ ಮಾತುಗಳನ್ನು ಆಡಿ ನಗುತ್ತ ಹೊರಟುಹೋದರು.

ಆದರೆ ಆ ನಗೆ ಗುರುದತ್ತನಿಗೆ ಮುಳ್ಳಿನಂತೆ ನೆಟ್ಟಿತು.

* * * *

ಇಂದು ಸಾಯಂಕಾಲ ಗುರುದತ್ತ ಮನೆಯಿಂದ ಹೊರಟಿದ್ದ. ಮುಖವೆಲ್ಲ ಬಾಡಿದಂತಿತ್ತು; ಗಡ್ಡ ಬೆಳೆದು ನಿಂತಿತ್ತು. ಗುರುದತ್ತ ತಂದೆತಾಯಿಗಳನ್ನು ಕಳೆದುಕೊಂಡಿದ್ದ. ಕೈಗೆ ಬಂದ ಹಣವೆಲ್ಲವನ್ನು ಖರ್ಚುಮಾಡಿದ. ಹಲವು ಜನರನ್ನು ಬೇಡಿ ಉಪಚಾರ ನಡೆಸಿದ. ಕೊನೆಗೆ ಸಾಗದಾಯಿತು. ಗುರುದತ್ತನೊಬ್ಬನನ್ನೇ ಅವನ ಚಿತ್ರಕಲೆಯೊಂದಿಗೆ ಬಿಟ್ಟು ತೆರಳಿದನು. ಬಡವನಿಗೆ ಯಾರು ಸಾಂತ್ವನ ಮಾಡಬೇಕು? ಭಾರತಿ ಮೇಲಿಂದ ಮೇಲೆ ಬಂದು ಮಾತನಾಡಿಸಿ ಹೋಗುವಳು. ವೇಳೆ ಕಳೆಯುವದೇ ದುಸ್ತರವಾಯಿತು. ಚಿತ್ರಗಳನ್ನು ಬರೆಯುವದರಲ್ಲಿಯೇ ವೇಳೆತೊಡಗಿಸಹತ್ತಿದ. ಇಂದು 'ಆರಾಧನೆ' ಎಂಬ ಚಿತ್ರ ಬರೆದು ಹೊರಟಿದ್ದ. ಮನೆಯ ಮುಂದೆಯೇ ಭಾರತಿ ಓಡುತ್ತ ಬರುವುದನ್ನು ಕಂಡ. ಭಾರತಿಯ ಮುಖ ಅಳುಮುಖವಾಗಿತ್ತು. ಗುರುದತ್ತನನ್ನು ಕಾಣುತ್ತಲೇ 'ಹೋ' ಎಂದು ಅಳಹತ್ತಿದಳು. ಮತ್ತೆ ಗುರುದತ್ತನ ಕೈಗೆ ಎರಡು ವರ್ತಮಾನ ಪತ್ರಗಳನ್ನು ಇತ್ತಳು. ಗುರುದತ್ತ ಪತ್ರಿಕೆ ತೆರೆದು ನೋಡಿದ ಮತ್ತೆ ಓದಿದ, ಕಲಾಕಾರ ಗೋವಿಂದ ಕುಮಾರರು 'ಅದರಡಿ ತಾನು ಗೋವಿಂದ ಕುಮಾರರಿಗೆ ಮಾರಿದ ಚಿತ್ರ! ಗುರುದತ್ತನ ಚಿತ್ರ!! ಎದೆ ಧಕ್ಕೆಂದಿತು. ಮುಂದೆ ಹೋಗಲಾಗಲಿಲ್ಲ. ಮನೆಗೆ ಮರಳಿದ ಮೈಯಲ್ಲಿ ಶಕ್ತಿಯೇ ಇಲ್ಲದಂತಾಯಿತು. ಕುರ್ಚಿಯೊಂದರಲ್ಲಿ ಕುಕ್ಕರಿಸಿದ. ಭಾರತಿ ಮಾತನಾಡಿಸಲು ಎದುರಿಗೆ ಬಂದಳು.

"ಭಾರತಿ, ನೀನು ಮನೆಗೆ ಹೋಗವ್ವ" ಎಂದು ಅವಳನ್ನು ಕಳಿಸಿ, ಯೋಚಿಸಹತ್ತಿದ. ಕತ್ತಲಾಯಿತು; ಆದರೆ ಅದರ ಅರಿವೇ ಇರಲಿಲ್ಲ. ಯಾರೋ ದೀಪವನ್ನು ಹಚ್ಚಿದರು. ಆದರೂ ಇವನ ಯೋಚನೆ ತೀರಲಿಲ್ಲ.

ಮರುದಿನ ಸಾಯಂಕಾಲ ಉಡುಪು ಹಾಕಿ ಹೊರಹೊರಟ. ತಾನು ಎಲ್ಲಿಗೆ ಹೊರಟಿರುವೆ ಎಂಬುದರ ಅರಿವೇ ಅವನಿಗೆ ಇರಲಿಲ್ಲ. ನಡೆಯುತ್ತ ಊರ ಆಚೆ ಗೋವಿಂದ ಕುಮಾರರ ಬಂಗಲೆಯ ಎದುರು ಬಂದು ನಿಂತ. ನಿಂತು ಒಳಗೆ ಹೋಗಲೋ ಹಿಂತಿರುಗಲೋ ಎಂಬ ವಿಚಾರವಾಯಿತು. ಕೊನೆಗೆ ನಿರ್ಧಾರಮಾಡಿ ಒಳಕ್ಕೆ ಹೋದ.

"ನಮಸ್ಕಾರ ಗುರುದತ್ತ" ಎಂದು ಸ್ವಾಗತಿಸಿದರು ಗೋವಿಂದ ಕುಮಾರರು.

"ನಮಸ್ಕಾರ" ಎಂದು ಗುರುದತ್ತ ಉತ್ತರಿಸಿದ. ಮತ್ತೆ ಕುರ್ಚಿಯೊಂದರಲ್ಲಿ ಕುಳಿತ.

"ಏನು ಗುರುದತ್ತ ಏನು ಕಾರಣ ಬರೋಣವಾಯಿತು? ಏನಾದರೂ ಸಹಾಯವಾಗಬೇಕೇ ನನ್ನಿಂದ?"

"ತುಂಬಾ ಸಹಾಯವಾಯಿತು" ಎಂದು ಗುರುದತ್ತ ತುಟಿಯನ್ನು ಕಚ್ಚಿ ತಡೆದ.

"ಈ ರೀತಿ ಮಾತಾಡುವಿಯೇಕೆ?"

"ಈ ದಿನದ ಪತ್ರಿಕೆ ಓದಿದಿರಾ?"

"ಓದಿದೆ."

"ಅದರಲ್ಲಿ ಪ್ರಕಟವಾದ ಚಿತ್ರ ನನ್ನದು" ಎಂದು ಗುರುದತ್ತ ಒಂದೇ ಉಸಿರಿನಲ್ಲಿ ಹೇಳಿಬಿಟ್ಟ.

"ಬರಿ ಹುಚ್ಚ ನೋಡು ನೀನು. ನಾನು ನಿನ್ನ ಕಡೆಯಿಂದ ಬೆಲೆಗಾಗಿ ಕೊಂಡ ಮೇಲೆ ಅದರ ಮೇಲೆ ನಿನ್ನ ಅಧಿಕಾರವೇನುಳಿಯಿತು? ಅದು ನನ್ನ ಸೊತ್ತು."

"ನೀವು ಕೊಂಡುದು ಬರೇ ಸ್ವಾಮಿತ್ವ. ನೀವು ಅದರ ಕರ್ತೃಗಳಲ್ಲ."

"ಹುಚ್ಚನಂತೆ ಮಾತಾಡುವಿಯಲ್ಲ."

"ನಾನು ಹುಚ್ಚನಲ್ಲ. ನೀವು ತುಸುವೂ ತಿಳಿಯದೆ ಮಾತನಾಡುವಿರಿ. ನಿಮಗೆ ದುಡ್ಡಿನ ಸೊಕ್ಕಿನಿಂದ ಹುಚ್ಚು" ಎಂದು ತುಸು ದನಿ ಏರಿಸಿದ.

"ಈ ರೀತಿ ನನ್ನ ಮನೆಗೆ ಬಂದು ದನಿ ತೆಗೆದು ನನ್ನ ಬೆದರಿಸುವಿಯಾ? ನನ್ನ ಅವಮಾನ ಮಾಡುವಿಯಾ?"

"ಕದ್ದು ಪ್ರಕಟನೆ ಮಾಡಿದ ಮೇಲೆ, ಕಳವನ್ನು ಹೊರಗೆಡಹದೇ ಇರುವದೇ?"

"ಚೆನ್ನಾಗಿ ಜೋಕೆಯಿಂದಿರು. ಚಂಡು ಹಿಡಿದೆ ಹೊರದಬ್ಬಿಸುವೆ."

"ಬೇಕಾದದ್ದು ಮಾಡಿ ನಾನು ಇಲ್ಲಿಂದ ಅಗಲುವುದಿಲ್ಲ" ಎಂದು ಹಟ ಹಿಡಿದ. ಇಬ್ಬರ ಮಾತಿನ ಮಟ್ಟ ಮಿತಿ ಮೀರಿತು. ಗೋವಿಂದ ಕುಮಾರ ಗುರುದತ್ತನನ್ನು ಹೊರದಬ್ಬಿಸಿದ.

"ಬಡತನ ನಮ್ಮನ್ನು ಕೊಂದಿತು" ಎನ್ನುತ್ತ ಮನೆಗೆ ಮರಳಿದ; ಮೈಯೆಲ್ಲ ನೋಯುತ್ತಿತ್ತು. ಆದರೆ ಮೇಲೆ ವಿಡಂಬನೆ! ಅವಮಾನ! ಮನೆಗೆ ತಲಪುವಾಗ ಕತ್ತಲೆಯಾಗಿತ್ತು; ಏನೂ ಬೇಡದಾಯಿತು. ಇವೆಲ್ಲ ವ್ಯರ್ಥ; ದುಡ್ಡೇ ಸರ್ವಸ್ವ ಎಂದು ಮುಂತಾಗಿ ಅನ್ನುತ್ತ ಊಟಕೂಡ ಮಾಡದೆ ಮಲಗಿದ.

ಬೆಳಗಾಯಿತು. ಆದರೆ ಗುರುದತ್ತನ ಮನೆಯ ಬಾಗಿಲೇ ತೆರೆಯಲಿಲ್ಲ; ಬೆಳಿಗ್ಗೆ ಭಾರತಿ ಬಂದು ನೋಡಿದಳು. ಮತ್ತೆ ನೋಡಿದಳು; ಬಿಸಿಲೇರಿದರೂ ಗುರುದತ್ತ ಏಳಲಿಲ್ಲವಲ್ಲ ಎಂದು ಬಾಗಿಲು ದೂಡಿದಳು. ಬಾಗಿಲು ತೆರೆದು ಕೊಂಡಿತು. ಭಯಾನಕ ದೃಶ್ಯ! ಆತ್ಮಹತ್ಯೆ!! ಗುರುದತ್ತನ ದೇಹ ಕೋಳುರ ಕಂಬದ ತೊಲೆಗೆ ತೂಗುತ್ತಿತ್ತು. ಕುತ್ತಿಗೆಯ ನರಗಳು ಹಿಗ್ಗಿ ನಿಂತಿದ್ದವು. ಅಲ್ಲೇ ಪ್ರಾಣ ಹೋಗಿರಬೇಕು.

ಜನವೆಲ್ಲ ಕೂಡಿದರು. ಭಾರತೀಯ ಆಕ್ರೋಶವಂತೂ ಹೇಳತೀರದು. ಬಂದ ಜನವೆಲ್ಲ ಬಹುವಾಗಿ ಮರುಗಿದರು. ಭಾರತಿಯು ಶೋಕದಿಂದ ಜೀವಕ್ಕೆ ಅಪಾಯ ಮಾಡಿಕೊಂಡಾಳು ಎಂದು ಅವಳನ್ನು ಅವಳ ಮನೆಗೆ ತಲುಪಿಸಿ ಬಂದರು. ಮತ್ತೆ ಪೋಲೀಸು ತಂಡನಾಮೆಯಾಗಿ ಶವಸಂಸ್ಕಾರವೂ ಮುಗಿದು ಹೋಯಿತು.

ಮರುದಿನ ಭಾರತಿ ಸಾಹಸಮಾಡಿ ಗುರುದತ್ತನ ಮನೆಗೆ ಬಂದಳು. ಎಲ್ಲವೂ ಮುಂಚಿನ ದಿನದಂತೆಯೇ ಇತ್ತು. ಮೇಜಿನ ಮೇಲೆ ಗುರುದತ್ತನ ದಿನಚರಿ (Diary) ತೆರೆದೇ ಬಿದ್ದಿತ್ತು. ಭಾರತಿ ದಿನಚರಿ ತೆರೆದು ಓದಿದಳು.

೨೦–೭–೧೯ . . .

ಮಧ್ಯ ರಾತ್ರಿ.

ಗುರುದತ್ತ, ನೀನು ನಿನ್ನ ಜೀವಮಾನವನ್ನೇ ಕಲೆಗಾಗಿ ವೆಚ್ಚಮಾಡಿದೆ. ಆದರೆ ಕೊನೆಗೂ ನಿನ್ನ ಕಲೆ ಶ್ರೀಮಂತರ ಕಾಲುಬುಡದ ಕಸವಾಯಿತು. ನಿನಗೆ ಮನ್ನಣೆಯಿಲ್ಲದಾಯಿತು. ಆ ಅವಮಾನ ಬಡವರಿಗೆ ಲಕ್ಷ್ಯದಲ್ಲಿಲ್ಲ. ಅದು ಅವರ ದಿನಮಾನಗಳಲ್ಲೊಂದು. ಅಹ ಆದರೆ . . . ? ನನ್ನ ಚಿತ್ರಗಳು!

ನಾನು ಬರೆದ ಚಿತ್ರಗಳು! ಅಲ್ಲ . . . ಅಲ್ಲ . . . ಅವು ಗೋವಿಂದ ಕುಮಾರರ ಚಿತ್ರಗಳು. ನನ್ನವಲ್ಲ! ನನ್ನ ಅಧಿಕಾರವೂ ನಡೆಯಲಾರದು! ನನ್ನ ಬಡತನವೇ ನನ್ನ ಕೃತಿಗಳನ್ನು ಮಾರಿತು . . . ಇಲ್ಲ ನನ್ನದು ನಾನು ಎಂಬುದೆಲ್ಲ ಬರಿ ಮಾಯೆ. ಇಡೀ ಆಯುಷ್ಯವೆಲ್ಲಾ ಆಸೆಯಿಂದ ನೋಡಿ, ನನ್ನ ಕಣ್ಮುಂದೆ ತಂದೆ ತಾಯಿಗಳು ತೀರಿಹೋದರು. ನಾನು ಒಂದು ದಿನವೂ ಅವರ ಸುಖ ಸಮಾಧಾನಕ್ಕಾಗಿ ಯತ್ನಿಸಲಿಲ್ಲ. ತಂದೆ ತಾಯಿಗಳ ವಿಷಯದಲ್ಲಿ ನಾನು ಕರ್ತವ್ಯ ಚ್ಯುತ. ಇನ್ನು ನಾನು ಯಾರಿಗಾಗಿ ಬದುಕಬೇಕು? ಇಲ್ಲ . . . ಇನ್ನಾರು? . . . ಹಾಂ. ಭಾರತಿಯೊಬ್ಬಳಿದ್ದಾಳೆ. ಪಾಪ! ನನಗಾಗಿ ಅವಳು ತನ್ನ ಸ್ವಾರ್ಥವನ್ನು ತ್ಯಾಗ ಮಾಡಿದ್ದಾಳೆ. ಅವಳು ನನಗಾಗಿ ಸಹಿಸಿದ ಕಷ್ಟ ತುಸುವಲ್ಲ. ನಾನಿಲ್ಲದಾಗ ನನ್ನ ತಂದೆ ತಾಯಿಗಳ ಸೇವೆಮಾಡುತ್ತಿದ್ದಳು. ನನ್ನ ನಂಬಿಗೆಯ ಪಟ್ಟ ಶಿಷ್ಯೆ. ಅವಳೇ ನನ್ನ ಹೆಸರನ್ನು ಉಳಿಸುವಳು . . . ಭಾರತಿ, ಇನ್ನು ಈ ಜಗತ್ತಿನಲ್ಲಿ ನಾನಿಲ್ಲ. ನನ್ನ ಇದ್ದ ಚಿತ್ರಗಳೇ ನಿನಗೆ ಮಾರ್ಗದರ್ಶಿ. ಅದೇ ನಿನಗೆ ಸ್ಫೂರ್ತಿ ತೋರುವವು. ಮರುಗಬೇಡ; ದುಃಖವೆಲ್ಲಾ ಬರಿದೆ. ನನ್ನ ಹೆಸರನ್ನು ಉಳಿಸಲು ನೀನಿರುವಿ. ನನ್ನ ಭಾರತಿ, ಹೋಗುವೆ . . . ಗುರುದತ್ತ, ಇನ್ನಿಲ್ಲ ವೇಳೆ ನಿನಗೆ. ಇದೇ ಸಿದ್ಧ; ನಾನು ಹೋಗುತ್ತೇನೆ."

ಭಾರತೀಯ ಕೈಯಿಂದ ದಿನಚರಿ ಕೆಳಗುರುಳಿತು.



# ಮನೆಗೆ ಮರಳುವಿಯಾ?

ಶ್ರೀನಿವಾಸ

ಈಗ ಎರಡು ವರ್ಷಗಳ ಹಿಂದಿನ ಮಾತು. ಮಹಾಯುದ್ಧ ಮುಗಿದು ವರ್ಷದ ಮೇಲಾಗಿದ್ದಿತು. ನಾನು ಹೌರಾದಿಂದ ಮುಂಬಯಿ ಮಾರ್ಗವಾಗಿ ನನ್ನ ಊರಿಗೆ ಹೊರಟಿದ್ದೆ.

ರಾತ್ರಿಯ ತಂಗಾಳಿ ನುಣ್ಣನೆ ತೀಡುತಿತ್ತು. ಮಲಗಬೇಕೆಂದು ಕಣ್ಣು ಸೂಚಿಸುತ್ತಿದ್ದುವು. ನಿದ್ದೆ ಬರುವಂತಿರಲಿಲ್ಲ.

ಅಖಂಡ ನಾಲ್ಕು ವರ್ಷ ಹೆಂಡತಿ, ಒಂದು ಮಗುವನ್ನು ಬಿಟ್ಟು ಇದ್ದು, ಈಗ ಜೀವಂತನಾಗಿ, ಕ್ಷೇಮದಲ್ಲಿ ಮರಳಿ ಅವರನ್ನು ಸೇರುತ್ತೇನಲ್ಲ ಎಂದು ಔತ್ಸುಕ್ಯದಿಂದ ನಲಿದಾಡುತ್ತಿದ್ದೆ. ಆ ಡಬ್ಬಿಯಲ್ಲಿ ಕುಳಿತ ಎಲ್ಲರ ಮುಖದ ಮೇಲೂ ಅದನ್ನು ಕಂಡೆ.

ಅಲ್ಲಿದ್ದವರೆಲ್ಲರೂ ಹೆಚ್ಚುಕಡಿಮೆ ತರುಣರೆ. ಪ್ರವಾಸದಿಂದ ಎಲ್ಲರ ಮುಖಗಳು ಬಳಲಿದಂತಿದ್ದರೂ, ನನ್ನ ಹಾಗೆ ಅವರ ಮನಸ್ಸೂ, ತಮ್ಮ ಮನದನ್ನೆಯನ್ನೊ, ಮುದ್ದಿನ ಮಕ್ಕಳನ್ನೊ, ತಂದೆತಾಯಿಗಳನ್ನೊ ನೆನೆಯುವದನ್ನು ಅವರ ಕಣ್ಣುಗಳು ಕದ್ದು ಒಡನುಡಿಯುತ್ತಿದ್ದುವು.

ಮನದಲ್ಲಿ ಏನೇನೊ ಮನೆಯ ಬಗ್ಗೆ ವಿಚಾರಗಳು. ಅದರ ಜೊತೆಗೆ ಯುದ್ಧದಿಂದ ಮರಳಿದ ಎಲ್ಲ ಯೋಧರ ಹೆಂಡಂದಿರೂ ಮೊದಲಿನ ಹಾಗೆಯೆ ಇರಬಲ್ಲರೆ? ಇಷ್ಟು ವರ್ಷಗಳ ವೇಳೆಯನ್ನು ಅವರು ಹೇಗಾದರೂ ಕಳೆದಿರಬಹುದು. ಮತ್ತೆ ಮೊದಲಿನ ಬಾಳ್ವೆಯೇ, ಸಂಪೂರ್ಣವಾಗಿ ಅನುಭವಿಸ ಸಿಗಬಲ್ಲುದೆ?......ನನ್ನವಳ ವಿಷಯದಲ್ಲೇನು ಆ ಬಗೆಯ ವಿಚಾರಗಳಿಗೆ ಆಸ್ಪದವೇ ಇಲ್ಲ. ನನ್ನ ವಿರಹದಿಂದಾಗಿ ಆಕೆ ಎಷ್ಟೊಂದು ನವೆದಿದ್ದಾಳೆ ಎನ್ನುವುದು, ಮೂರುದಿನದ ಹಿಂದೆ ಬಂದ ಅವಳ ಪತ್ರದಲ್ಲಿ ಎಷ್ಟೊಂದು ವ್ಯಕ್ತವಾಗಿದೆ.

ಕಿಸೆಯಿಂದ ಅದನ್ನು ಹೊರತೆಗೆದು, ಇನ್ನೊ ಒಮ್ಮೆ ಓದಿದೆ. ಅದಕ್ಕೆ ಮುತ್ತಿಟ್ಟೆ.

ಬೆಳಗು ಹರಿದಾಗ ಗಾಡಿಯು ನಾಗಪೂರನ್ನು ತಲಪಿತ್ತು. ತುಂಬು ನಿದ್ದೆಯಿಂದ ಮನಸ್ಸು ತೃಪ್ತಿಗೊಂಡಿತ್ತು. ಎದ್ದು ಮುಖತೊಳೆದು ಚಹ ಕುಡಿದು ಬಂದು ಕುಳಿತೆ.

ಗಾಡಿ ಬಿಟ್ಟಕೂಡಲೇ ಕಿಟಿಕಿಯು ಹೊರಗೆ ಮುಖ ಹಾಕಿ, ಕನ್ನಡ ಹಾಡೊಂದನ್ನು ಮನದಣಿಯೆ ಹಾಡುತ್ತಿದ್ದೆ. ಗಾಡಿಯ ಸಪ್ಪಳದಲ್ಲೇ ನನ್ನ ಸ್ವರ ಲೀನವಾಗಿ ಹೋಗುತ್ತಿದ್ದರೂ, ತುಂಬಿದ ಮನಸ್ಸು ಹಾಡಿಸದೆ ಇರಲಿಲ್ಲ.

ಕೊನೆಗೆ ಒಬ್ಬರು ನನ್ನ ಬೆನ್ನು ತಟ್ಟಿದಾಗ, ಹೊರಳಿ ನೋಡಿದೆ, ಹನುಮಜೀ !

ಹನುಮಜೀ ಕನ್ನಡದ ಹನುಮನೇ. ಆ 'ಜೀ'ಯನ್ನು ನಾನೇ ಸೇರಿಸಿದ್ದು. ಗೊಂಡಾಲಿಯಾ ಕ್ಯಾಂಪಿನಲ್ಲಿ, ಇಬ್ಬರೂ ಅಕಸ್ಮಾತ್ತಾಗಿ ಕೆಲಸ ಮಾಡುವ ಪ್ರಸಂಗ ಬಂತು. ನಾನೂ ಕನ್ನಡಿಗ ಎಂಬುದು ಮೊದಲಿಗೆ ಅವರಿಗೆ ತಿಳಿಯದೆ ನನ್ನ ಸಂಗಡ ಮಾತನಾಡುವಾಗ, ಪ್ರತೀ ವಾಕ್ಯಕ್ಕೂ 'ಜೀ, ಜೀ' ಸೇರಿಸುತ್ತಿದ್ದ. ಅದಕ್ಕೆಯೇ ಅವ ಹನುಮಜೀ ಆದುದು. ಇಡೀ ನಾಲ್ಕು ವರ್ಷಗಳ ಕಾಲ ಒಂದೆರಡು ರಜೆಗಳಲ್ಲಿ ಊರಿಗೆ ಹೋದುದನ್ನು ಬಿಟ್ಟರೆ, ಕನ್ನಡ ಮಾತನಾಡಸಿಕ್ಕಿದ್ದು ಅವನ ಜೊತೆಗೆ ಮಾತ್ರ. ಆ ದಿನಗಳನ್ನು ಎಷ್ಟು ಹಿತವಾಗಿ ನಾವು ಕಳೆದಿದ್ದೆವು! ಅದೆಲ್ಲ ನನಪಿಗೆ ಬಂತು. ನಮ್ಮಲ್ಲಿರುವ ಜಾತಿ ಭೇದ, ಶಿಕ್ಷಣಮಟ್ಟ ಇವಾವೂ ಅಡ್ಡಬಂದಿರಲಿಲ್ಲ ಎಂಬ ಮಾತನ್ನು ಅವ ನೆದುರೇ ಆಡಿ ತೋರಿಸಿದ್ದ.

"ಹೆಲೊ! ಹಿಸ್ಸ ಹಾಯನೆಸ್! ಎಲ್ಲಿಂದ ಬಂದದ್ದು? ನಾಗಪೂರಕ್ಕೆ ಹತ್ತಿದೆಯೊ?"

"ಇಲ್ಲ, ಸೋನೇಹಿಯಿಂದಾ ಹತ್ತಿದ್ದು. ಬಂದಾಗ ಎಲ್ಲರೂ ಮಲಗಿದ್ದರು. ನನಗೂ ನಿಂದೆಬಂದಿತ್ತು. ಮಲಗಿಬಿಟ್ಟೆ; ಇದೇ ಎದ್ದೆ. ಅದೂ ಏಳುತ್ತಿರಲಿಲ್ಲ. ನಿಮ್ಮ ಹಾಡು ಬಡಿದು ಎಬ್ಬಿಸಿತು" ಎಂದ.

ಅಕಸ್ಮಾತ್ ಹೀಗೆ ಭೆಟ್ಟಿಯಾದುದರ ಫಲವಾಗಿ ನಮ್ಮಿಬ್ಬರಿಗಾದ ಸಂತೋಷ ಹೇಳತೀರದು. ನಾನು ಕೇಳಿದೆ: 'ನೀನೀಗ ನಿನ್ನ ಹಾವನೂರಿಗೇ ಹೋಗುವವ ಏನು?' ಎಂದು.

'ಹೌದು, ಯಾಕೆ?'

'ಧಾರವಾಡಕ್ಕ ಬಂದು, ಒಂದೆರಡು ದಿನ ಇದ್ದು ಹೋಗಲ್ಲ.'

'ನೀವು ಯಾಕ ನಮ್ಮ ಹಳ್ಳಿಗೆ ಬರಬಾರದು? ಅಲ್ಲಿ ಹೇಗೂ ನಿಮ್ಮ ಸಂಬಂಧಿಕ ವಾಸಪ್ಪನವರು ಇದ್ದಾರಲ್ಲ?'

'ಛೇ, ಛೇ! ನನ್ನ 'ಡಿಯರೀ'ಗೆ ಇಂಥಾ ದಿನ, ಇಂಥಾ ಗಾಡಿಗೆ, ಇಷ್ಟು ತ್ತಿಗೇ ಬರತೇನಿ ಅಂತ ತಿಳಿಸೇನಿ. ದಾರಿ ಕಾಯುತಿರತಾಳೆ. ಆ ವೇಳೆಗೆ ನಾ ಇರಲಿಲ್ಲ ಅಂದರೆ ನನ್ನ ಉಳೀಗೊಟ್ಟಾಳೆಯೆ? ಯಾರ ಮನಸ್ಸು ನೋಯಿಸಿದರೂ ಅಡ್ಡಿಯಿಲ್ಲ, ಹೆಣ್ಣುಮಕ್ಕಳ ಮನಸ್ಸು ನೋಯಿಸಬಾರದು' ಎಂದೆ.

ಒಂದು ಕ್ಷಣ ಯೋಚಿಸಿ ಅವನು 'ನಿಮ್ಮಲ್ಲೊಂದು ಕಾರ್ಡು ಇದ್ದರೆ ಕೊಡುತೀರಾ?' ಎಂದು ಕೇಳಿದ.

ಅವನಿಗೆ ತನ್ನ ಹೆಂಡತಿಗೆ ಕಾಗದ ಬರೆಯಬೇಕೆಂದು ಆಗ ಅನಿಸಿದೆ! ಆದರೆ ಕಾರ್ಡು ನನ್ನಲ್ಲಿರಲಿಲ್ಲ. 'ಏಕೆ, ಇದಕ್ಕೂ ಮೊದಲು ಬರೆದಿಲ್ಲವೆ?'

'ಎಲ್ಲಿ ಪುರುಸೊತ್ತೇ ಇಲ್ಲ. ಗಾಡಿಗಳಲ್ಲೇ ದಿನ ಹೋಗ್ತಾ ಇದೆ.'

'ನಾಸಿಕಕ್ಕೆ ೨-೩ ಗಂಟೆ ಮಾತ್ರ ಇಳಿದು, ಸ್ವಲ್ಪ ಊರು ನೋಡಬೇಕೆಂದು ಮಾಡಿದ್ದೇನೆ. ಅನಾಯಾಸ ಜೊತೆಯಾಯಿತು. ಆವಾಗ ಊರಲ್ಲಿ ಕಾರ್ಡು ತೆಗೊಳ್ಳುವಂತಿ......ಯಾಕೆ, ನಿನ್ನ ಹೆಂಡತಿಯೂ ಸಮೀಪದಲ್ಲಿ ಕಾಗದ ಬರಸಿಲ್ಲವೇನು?'

'ಒಂದು ವರ್ಷದ ಮೇಲೆ ಆಯ್ತು, ಪತ್ರ ಇಲ್ಲದೆ. ಆಕೆ ಬರೆಸಿರಬಹುದು. ಆದರೆ ನನಗೆ ಪತ್ರ ಸಿಗುವ ಹಂಗೇ ಇರಲಿಲ್ಲ. ನನ್ನ ರೆಜಿಮೆಂಟಿನವರು ನಾನು ಬರ್ಮಾ ಕಾಳಗದಲ್ಲಿ ತೀರಿಹೋದೆನೆಂದೇ ತಿಳಿದಿದ್ದರು' ಎಂದ.

'ಅಂದರೆ?' ನನಗೆ ಆಗ ಅವನ ಈಚಿನ ಕತೆ ತಿಳಿಯಬಂತು. ಮಂಡಾಲೆಯಲ್ಲಿ ಬಾಂಬುದಾಳಿಯಾಗಲು, ಪಾರಾಗಲೆಂದಾಗ, ಅವನು ಅಲ್ಲೇ ಉಳಿದುಬಿಟ್ಟನಂತೆ. ಆ ಮೇಲೆ ಎಲ್ಲೆಲ್ಲೊ ಅಂಡಲೆದು ಕೊನೆಗೆ ಯುದ್ಧ ಮುಗಿದುದರಿಂದ ಭಾರತದಲ್ಲಿಯ ತನ್ನ ಮುಖ್ಯ ಕಚೇರಿಗೆ ತಲಪಿ, ಪಾಸನ್ನೂ ಪಗಾರವನ್ನೂ ದೊರಕಿಸಿಕೊಂಡು ಊರಿಗೆ ಹೊರಟಿದ್ದ.

ಮಾತು ಮುಗಿಸಿದೊಡನೆ ಅವನಿಗೆ ಇನ್ನೊಂದು ನೆನಪಾಯಿತು. ತನ್ನ ಹೋಲ್ಡಾಲನ್ನು ಬಿಚ್ಚಿ, ಅದರಲ್ಲಿಯ ಒಂದು ನೋಟುಬುಕ್ಕಿನಿಂದ ತನ್ನ ಹೆಂಡತಿಯ ಮಾಸಿದ ಚಿತ್ರವೊಂದನ್ನು ತೋರಿಸಿದ.

ಅದನ್ನವಳು ಹೋದವರ್ಷದ ತಮ್ಮೂರ ಜಾತ್ರೆಯಲ್ಲಿ ತೆಗೆಯಿಸಿ ಕೊಂಡದ್ದು. ಚಿತ್ರ ಈಗ ಹಳತಾದರೂ, ತಿದ್ದಿ ತಿದ್ದಿ ಮಾಡಿದಂತಿದ್ದ ಅವಳ ಮೈಮಾಟ, ಮುಖದ ಅಂದ ಚೆನ್ನಾಗಿ ವ್ಯಕ್ತವಾಗುತ್ತಿದ್ದಿತು.

'ಛಂದ ಇದ್ದಾಳೊ' ಅಂದೆ.

'ಬಣ್ಣ ಒಂದು ಇದ್ದಿದ್ರ, ನಿಮ್ಮ ಶಹರದ ಹುಡುಗಿಯರು ಅವಳ ಮುಂದೆ ಝುಕ್ಕಿಸಿದರು; ಹಂತಾ ಚೆಲುವಿ ಆಕೆ. ಹಂಗಂತ ಅವಳು ಕಪ್ಪೇನಿಲ್ಲ, ಆದ್ರೂ ನಿಮ್ಮ ಬಿಳೀ ಬಣ್ಣ ಹಳ್ಳಿಯುವರಿಗೆ ಹೆಂಗ ಬಂದಿತು?' ಎಂದ.

'ದೈವಾನಪಾ, ನೀನು.'

ಅವನು ತುಸು ಉತ್ಸಾಹಿತನಾಗಿ ಹೇಳಿದ. 'ಎಷ್ಟು ಮಂದಿ ಹೊಂಚ ಹಾಕಿ ಕೂತಿದ್ರು. ಆದ್ರೂ ಆಕೆಗೆ ನನ್ನ ಮೇಲೆ ಏನೋ ಆಸೆ. ಹೇಳೇನಲ್ಲ ನಿಮಗ, ಯಾವಾಗ ಆಕೆಯು ಚಿಗವ್ವ, ದುಡ್ಡಿನ ಆಸೆಗೆ ಅವಳನ್ನು ಕೊಪ್ಪಳದ ಗಂಗೂಸಾನೀ ಮನ್ಯಾಗ ಬಿಟ್ಟುಬರಬೇಕೆಂದು ಹೊಂಚು ಹಾಕಿದ್ದಳೊ, ನಾ ಅದನ್ನು ಕಷ್ಟಪಟ್ಟು, ಬಡಿದಾಡಿ ತಪ್ಪಿಸಿದೆನಲ್ಲ, ಅದು ಅವಳಿಗೆ ಪಟಾಯಿಸಿತು . . . ಮದುವಿ ಆದೆವು. ಮದುವಿ ಆಗೋದಕ್ಕ ನಮ್ಮೂರ ಶಾನಭೋಗರು ಬಹಳ ಹುರುಪು ತಗೊಂಡರು.'

ಆ ಫೋಟೋವನ್ನೇ ನೋಡುತ್ತ ನಾನು 'ನೀ ಇಲ್ಲದಾಗ ನಿನ್ನ ಹೆಂಡತಿಗೆ ಇವರೆಲ್ಲಾ ತ್ರಾಸ ಕೊಟ್ಟಿದ್ದರೆ – ? ಹಂಗೇನಾಗಿಲ್ಲಲ್ಲ?' ಎಂದೆ.

'ಛೆ, ಹೊನ್ನಿ ಅಂತಹದಕ್ಕೆಲ್ಲ ಸೊಪ್ಪು ಹಾಕುವವಳಲ್ಲ, ಅವರ ಚಿಗವ್ವನ ಸಂಗತೀ ಅಂತು ಜಗಳವಾಗಿ ಬಿಟ್ಟಿದೆ. ನಮ್ಮನಿಗೆ ಕಾಲು ಹಾಕಲಿಕ್ಕೇ ಆ ಹೊಯ್ಯಾಲಿಗೆ ಧೈರ್ಯವಿಲ್ಲ. ಇನ್ನ ಉಳಿದವರು ಯಾರಿಗೂ ಹೊನ್ನೀ ಉಸಾಬರಿಗೆ ಹೋಗುವ ತಾಕತ್ತಿಲ್ಲ. ಇಷ್ಟಾಗಿ, ದೆವ್ವನಂತಾ ಶಾನಬೋಗರ ದಾರು.'

'ಅದೇನು ನೀ ಹೀಗೆ ಹೇಳತಿ? ನಿಮ್ಮೂರ ಶಾನಭೋಗರೇ ಮಹಾ 'ಇದು' ಇದ್ದಾರಂತ! ಎರಡು ವರ್ಷದ ಹಿಂದೆ ನಾ ಒಂದು ತಿಂಗಳ ರಜೆ ಮೇಲೆ ಊರಿಗೆ ಹೋಗಿದ್ದೆ ನೋಡು, ಆಗ ನಮ್ಮ ವಾಸಪ್ಪನ ತಮ್ಮ ಬಂದಿದ್ದ, ಹೇಳಿದ – ಅವರೇನೊ ಊರೊಳಗ ಇದಕ್ಕಾಗಿ ಒಮ್ಮೆ ಬಡೆತ ತಿಂದಾರಂತ.'

'ಆಗದವರು ಏನಾದರೂ ಹೇಳುವುದೇ. ಹೊರಚಟಾ ಮಾತ್ರ ಅದೆ. ಅದೇನು, ಅವರ ಅಜ್ಜ ಮುತ್ತಜ್ಜನಿಂದ ನಡಕೋತ ಬಂದದ್ದು, ಇವರಾದರೂ

ಅಷ್ಟೇ. ಮುದುಕರಾಗಿದ್ದಾರೆ ಸೂಳೀಮನಿಗೆ ಹೋಗುವದೇನು ಬಿಡೋಣಿಲ್ಲ. ಆದ್ರ, ಅವರ ಮನಸ್ಸು ಎಂತಾ ಮನಸ್ರಿ! ಛೆ.'

'ಅದೇನೇ ಹೇಳು. ಹಳ್ಳಿವಳಗ ಇದೆಲ್ಲ ಸಾಮಾನ್ಯ ಮಾತಾಗಿಬಿಟ್ಟಿವೆ. ತಾ ಸ್ವತಃ ಏನೇ ಮಾಡತಿರಲಿ, ಗಂಡ ಹೆಂಡತಿಮ್ಯಾಲೆ ಸಂಶಯ ತಗೊಳ್ಳೋದು. ಮೇಲೆ ಸ್ವಲ್ಪೇನರೆ ನಿಜಾಂಶ ಕಂಡುಬಂದರೆ, ನೀವು ಹೆಂಡತಿನ್ನರೆ ಕಡಿದು ಹಾಕುತ್ತೀರಿ, ಇಲ್ಲವೆ ಆ ಇನ್ನೊಬ್ಬನ್ನರೆ ಮುಗಸ್ತೀರಿ.'

'ಹೌದು. ಆದ್ರ ಅಷ್ಟು ಮುಂದ ಹೋಗಬಾರದು. ಸಿಟ್ಟಿನ ಕೈಯಾಗ ಬುದ್ಧಿ ಕೊಡೋದು, ಮುಂದ ಅದರಿಂದ ತಮಗೇ ಎಲ್ಲ ರೀತಿಯಿಂದ ಕೆಡಕು ಆಗುವದು, ಅನ್ನೋದರ ವಿಚಾರ ಮಾಡೂದಿಲ್ಲ' ಎಂದನು.

'ಊಂಹು. ಅದಲ್ಲ, ನಾ ಹೇಳಿದ್ದು. ಹೀಂಗ ಸಂಶಯ ತಗೊಂಡು, 'ತನ್ನ ಹೆಂಡತಿ ಅಡ್ಡ ದಾರಿ ಹಿಡಿದಿದ್ದಾಳೆ ಅಂತ ತಿಳಿಯೋದೇ ತಪ್ಪು' ಅಂತ ನಾ ಅಂತೇನಿ, ಹಂಗಾಗಲಿಕ್ಕೆ ಗಂಡಂದಿರೇ ಕಾರಣ. ತಮಗೆ ತಮ್ಮ ಹೆಂಡತೀನ್ನ ಸರಿಯಾಗಿ ನಡೆಸಿಕೋಳಿಕ್ಕೆ ಆಗಿಲ್ಲ, ಅಂತೇ ಅರ್ಥ ಆಗತೇದ. ಒಬ್ಬರಿಗೊಬ್ಬರು ಅನ್ಯೋನ್ಯ ಪ್ರೀತಿ ಇದ್ದರೆ, ಎರಡನೆಯ ಕಡೆ ಮನಸ್ಸರೆ ಹೇಗೇ ಹರಿದೀತು?'

'ಪ್ರೀತಿ, ಗೀತಿ ಅದೆಲ್ಲ ನಾಟಕ, ಸಿನಿಮಾಗಳ ಮಾತು ಆತು. ಅಂಥ ಪ್ರಸಂಗನೇ ಬರತಾವನ್ರಿ. ನಮ್ಮೂರೊಳಗ ಭರಮಜ ಅಂತ ಒಬ್ಬವಗ ಮಾರಿಕಾಬೇನೆ ಬಂದು ಕುರುಡು ಆಗಿಬಿಟ್ಟಾನೆ. ಕಾಲಿನ ತ್ರಾಣನೇ ಹೋಗಿವೆ. ಯಾವಾಗಿದ್ರೂ ಹಾಸಿಗೆಯ ಮೇಲೆಯೇ! ಮನ್ಯಾಗ ಆದಾರು ಮಕ್ಕಳು ಹೆಂಡತಿ ಏನು ಮಾಡಬೇಕು ಅಂಥ ಹೊತ್ತಿನಲ್ಲಿ? . . . . ಊರೆಲ್ಲ ಬೊಬ್ಬಿ ಇಡತಿತ್ತು ಆಕೆಯ ಶೀಲದ ವಿಷಯಕ್ಕ. ನನಗೇನೂ ಇದು ನಿಜ ಇರಲಿಕ್ಕಿಲ್ಲ. ಇದ್ದರೂ ಆಕೆಯದು ತಪ್ಪಲ್ಲವಲ್ಲ, ಅದರಿಂದ ಅವಳಿಗೆ ದುಡ್ಡು ಬಂದು ತನ್ನ ಸಂಸಾರದ ಹೊಟ್ಟೆ ತುಂಬುತಿದ್ದರೆ — ಎಂದೂ ಒಮ್ಮೊಮ್ಮೆ ಅನಿಸುತ್ತದೆ.'

'ಒಮ್ಮೆ ಯಾಕೆ. ನನ್ನ ದೃಷ್ಟಿಯಲ್ಲಿ ಅದು ಸಂಪೂರ್ಣ ಸರಿಯಾದದ್ದು. ನಾವು ಯಾವಾಗಲೂ Natural view of things ತಗೋಬೇಕು. ಮೂರು ನಾಲ್ಕು ವರ್ಷದ ಗಟ್ಟಲೆ ಗಂಡಂದಿರು ಇದ್ದು ಇಲ್ಲದ ಹಾಗೆ ಆದರೆ ಏನು ಮಾಡಬೇಕು? ಈ ಕಾಮ ಪ್ರವೃತ್ತಿ ಅನ್ನುವುದು, ನಿಸರ್ಗ ಸಹಜ, ಎಲ್ಲರಲ್ಲೂ ಇರುವುದೇ. ಅದು ಹೊರಹೊಮ್ಮಲು ಸ್ವಾಭಾವಿಕವಾದ ದಾರಿ ಇಲ್ಲವಾದರೆ,

ಅದಕ್ಕೆ 'ಹಾದರ' ಅಂತ ಒಂದು ಸ್ವರೂಪ ಕೊಟ್ಟು, ಅದು ಒಂದು ದೊಡ್ಡ ಅಪರಾಧ ಅಂತ ಹೇಳತೀವಿ.'

ಇಷ್ಟು ನಾ ಹೇಳಿದುದರ ಅರ್ಥ ಆತ ಗ್ರಹಿಸಿದುದು ಅವನ ಮುಖದಲ್ಲಿ ಸ್ಪಷ್ಟವಾಗಿತ್ತು. ಅವನು ಹೇಳಿದ. 'ನಮ್ಮ ಹೆಡ್ ಆಫೀಸಿಗೆ ಹೋದಾಗ ಎ. ಟಿ. ಸಿ. ಓ. ಅಂತಿದ್ರು ಯುರೋಪದೊಳಗ ಯುದ್ಧ ಮುಗಿದ ಮೇಲೆ, ನೂರಕ್ಕೆ ಎಪ್ಪತ್ತರಷ್ಟು ಹೆಂಗಸರೂ, ಮೂವತ್ತರಷ್ಟು ಗಂಡಸರೂ ಆಗಿದ್ದಾರೆ. ಒಬ್ಬೊಬ್ಬರು ಬೇಕಾದ ಹಾಗೆ ಇಬ್ಬರು ಹೆಂಡಂದಿರನ್ನು ದೊರಕಿಸಬಹುದು, ಎನ್ನುತ್ತ ನಕ್ಕರು.'

'ನೋಡು, ಅಂಥ ಪ್ರಸಂಗದಲ್ಲಿ ನಾವು 'ವ್ಯಭಿಚಾರ' ಎಂದು ಹೇಳುವುದೇ ತಪ್ಪಲ್ಲವೆ? ಈಗ ನಮ್ಮದೇ ನೋಡು, ನಾಕು ವರ್ಷದ ವರೆಗೆ, ನಮ್ಮ ಹೆಂಡಂದಿರು ನಮ್ಮ ಆಸೆ ಬಿಟ್ಟು ಇರಬೇಕು. ಮತ್ತೆ ಯುದ್ಧಕ್ಕೆ ಹೋಗಿರ ತೇನೆಯೋ – ಇಷ್ಟೇ ವರ್ಷಕ್ಕೆ, ಅದೂ ಜೀವಂತವಾಗಿ, ತಿರುಗಿ ಬರುತ್ತೇವೆ ಅಂತ ಖಾತ್ರಿ ಇರೂದಿಲ್ಲ. ಅಂಥದರೊಳಗ ಏನು ಮಾಡಬೇಕು ಅವರು? ಈಗ ಸ್ವತಃ ನನ್ನ ಹೇಣ್ತೀನೇ, ಬೇರೆ ಕಡೆಗೆ ಮನಸ್ಸು ಹಾಕಿ, ಅವನ್ನ ನಾ ಲಗ್ನ ಆಗತೇನಿ ಅಂತಿದ್ರ ನಾ ಏನೂ ಅಡ್ಡಿ ಬರತಿದ್ದಿಲ್ಲ. ಸುಮ್ನೆ ಆಕೆಯ ಪಾಲಿಗೆ ಆಕಿನ್ನ ಇರಗೊಡತಿದ್ದೆ. ಸಹಜೀಕ ಇದೆ ಅದು . . . ನನ್ ಸ್ವಭಾವ ಅಂಥದು ನೋಡು.'

ಹೀಗೆಂದು ಹೇಳಹೇಳುತ್ತಲೇ, ನನಗೆ ಕಿಸೆಯಲ್ಲಿನ ಪ್ರೇಮಪೂರಿತ ಪತ್ರವನ್ನು ಮುಟ್ಟಿನೋಡುವ ಆಸೆಯಾಯಿತು.

ಅವನು ಹೇಳಿದ, 'ಮತ್ತ ಅದಕ್ಕೇ ಅಲ್ಲವೆ, ನಾನೂ ನೀವೂ ಗೂಂಡಾಲಿ ಯಾದೊಳಗ ಇದ್ದಾಗ, ಹತ್ತಿರ ಇದ್ದ ಕಾನಪೂರದ 'ಸಂದಿಗೊಂದಿ'ಯಲ್ಲಿ ೩–೪ ಸಲ ತಿರುಗಾಡಿದ್ದು' ಎಂದು ನೆನೆದು ಹುಸಿನಕ್ಕನು.

ಈ ಸಂಭಾಷಣೆಯಿಂದ ನಾನು ಓದಿ ಅರಗಿಸಿಕೊಂಡು ನನ್ನದಾಗಿ ಮಾಡಿಕೊಂಡ ಒಂದು ವಿಚಾರವನ್ನು ಎರಡನೆಯವರ ಮೇಲೆ ಬಿಂಬಿಸಿದೆನಲ್ಲ ಎಂದು ಸಣ್ಣದೊಂದು ನೆಮ್ಮದಿಯಿಂದ ಬೀಗಿ, ಅವನ ಹೆಂಡತಿಯ ಚಿತ್ರವನ್ನು ಇನ್ನೊಮ್ಮೆ ಸಹಜವಾಗಿ ನೋಡಿ ಅವನ ಕೈಗಿತ್ತೆ.

ನಾಸಿಕದಲ್ಲಿ ಇಳಿದು ನಾವು ಊರಲ್ಲಿ ಹೋದಾಗ, ಅವನಿಗೆ ಪತ್ರ ಬರೆಯುವ ನೆನಪು ಮಾಡಿದೆ. 'ಹೌದು ಬರೆಯುಬೇಕು' ಎಂದವನು, ತುಸು

ಯೋಚಿಸಿ, 'ಇಲ್ಲ, ನಾ ಅವಳಿಗೆ ಗೊತ್ತಾಗದಂತೆ ಹೋಗಿ, ಆಕೆಗೆ ಆಶ್ಚರ್ಯ ವನ್ನುಂಟುಮಾಡುವೆ. ಅದೇ ಅವಳಿಗೆ ಅತಿಯಾದ ಸಂತೋಷವನ್ನುಂಟು ಮಾಡಬಹುದಲ್ಲವೆ? ಅದೇ ಮಜ' ಎಂದನು.

ನನಗದು ಎಷ್ಟೂ ಹಿಡಿಸಲಿಲ್ಲ. 'ನನ್ನಿಸಿಯುಳು ನಾನು ಬರುವೆನೆಂದು ತಿಳಿದಾಗೇ ಏನೊಂದು ಸಂತಸಗೊಂಡಿರುವಳೆಂಬುದು, ಅವಳ ಪತ್ರದಿಂದ ತಿಳಿಯುಬರುತ್ತದೆ. ನನ್ನನ್ನು ಸ್ವಾಗತಿಸಲು ಎಷ್ಟೊಂದು ಸಿದ್ಧತೆ ಮಾಡಿರು ತ್ತಾಳೆ! ಹೊನ್ನಮ್ಮಗೂ ಆ ಸುಖದ ಹಕ್ಕು ಇಲ್ಲವೆ?' ಎಂದುಕೊಂಡು ತುಸು ವಾದಿಸಿದೆ. ಅವನು ಕೇಳಲಿಲ್ಲ, ಅದರ ಜೊತೆಗೆ, 'ಇಷ್ಟಕ್ಕೂ ಬುಧವಾರವೇ ನಾನಲ್ಲಿರುವುದರಿಂದ, ಮೂರೇ ದಿನದಲ್ಲಿ, ಇಲ್ಲಿಂದ ಆ ಹಳ್ಳಿಗೆ ಪತ್ರ ಹೋಗಿ ಮುಟ್ಟುವದೂ ಸಾಧ್ಯವಿಲ್ಲ' ಎಂಬ ನೆಪವನ್ನೂ ಸೇರಿಸಿದ.

ಕೂಡಲೇ ನನಗೊಂದು ಒಳ್ಳೆಯ ವಿಚಾರ ಹೊಳೆಯಿತು. ನಾನೇ ಇವನ ಹೆಸರಲ್ಲಿ ಶಾನಭೋಗರಿಗೆ ಕಾಗದ ಬರೆದು ಬಿಟ್ಟರೆ ಹೇಗೆ? ಅವಳು ಎಲ್ಲ ಬಗೆಯಿಂದಲೂ ಎದುರುಗೊಳ್ಳಲು ಸಿದ್ಧತೆ ನಡಿಸುತ್ತಾಳೆ. ಮನೆಗೆ ಹೋಗಿ ಈಗ ನೋಡುವ, ಅಚ್ಚರಿಯಾಗುವುದು. ಯಾರು ತಿಳಿಸಿದರು ಇವಳಿಗೆ, ಎಂದು. ಕೊನೆಗೆ ಇಬ್ಬರಲ್ಲೂ ನನ್ನ ನೆನಪು ಉಳಿಯುವಂತಾಗು ವುದು ಎಂದುಕೊಂಡು ಅವನಿಗೆ ಗೊತ್ತಾಗದಂತೆ Fxpress ಕಾರ್ಡ ಹಾಕಿಯೂ ಬಿಟ್ಟೆ.

ಇನ್ನು ಮುಂದಿನ ಸಂಗತಿಯನ್ನು ನನಗೆ ಹೊನ್ನಮ್ಮ ಹೇಳಿದುದು.

ನಾಳೆ ಬೆಳಗಿನ ೯ ಗಂಟೆಯ ಮೋಟಾರಿಗೆ ಅವನು ಬರುವನೆಂಬುದನ್ನು ಶಾನಭೋಗರು ಅವಳನ್ನು ಕರಸಿ ಹೇಳಿದಾಗ ಅವಳ ಆನಂದಕ್ಕೆ ಪಾರವೇ ಇರಲಿಲ್ಲ. ದೈವ ಅನೀರೀಕ್ಷಿತವಾಗಿ ದಯಪಾಲಿಸಿದ ಚಿಂತಾಮಣಿಯಾಗಿತ್ತು ಆ ಸುದ್ದಿ. ಶಾನಭೋಗರೂ ಹಿಗ್ಗಿದರು.

'ಎಂಟು ದಿನ ಮುಂಚೆಯೇ ಬರಬಾರದಿತ್ತೆ? ಜಾತ್ರೆಯನ್ನಾದರೂ ನೋಡಬಹುದಿತ್ತು. ಖಾಕಿ ಡ್ರೆಸ್ಸನ್ನು ಹಾಕಿಕೊಂಡ ಅವನ ಜೊತೆಗೆ ನಾನು ಜಾತ್ರೆಯಲ್ಲೆಲ್ಲಾ ತಿರುಗಾಡಬಹುದಿತ್ತು' ಎಂದುಕೊಂಡಳಾಕೆ.

ಇಷ್ಟು ದಿನವೂ ವಿಶೇಷ *ಕೆಲಸವಿಲ್ಲದಿದ್ದ ಅವಳಿಗೆ ಈಗ ಮೈ ತುಂಬ ಕೆಲಸವೆನಿಸಿತು. ಮನೆಯನ್ನೆಲ್ಲ ಚೆನ್ನಾಗಿ ಗುಡಿಸಿ ಸಾರಿಸಿದಳು. ಹೊಸ್ತಿಲದ ಎರಡೂ ಮಗ್ಗಲಿಗಿರುವ ಕಲ್ಲನ್ನು ತಿಕ್ಕಿ ನುಣುಪುಗೈದಳು. ನಾಲ್ಕೂರು

ತಿರುಗಾಡಿದವ, ಕೊಳೆ ಕಂಡರೆ ಅವಗೆ ಆಗಲಿಕ್ಕಿಲ್ಲವೆಂದು, ಮನೆಯಲ್ಲಿನ ಒಂದೂ ಬಟ್ಟೆಯನ್ನು ಬಿಡದೆ, ಹೊಳೆಗೆ ಹೋಗಿ, ಒಗೆದುಕೊಂಡು ಬಂದಳು.

ಪ್ರತಿತಿಂಗಳೂ ತನಗೆ, ಮಿಲಿಟರಿ ಕಛೇರಿಯಿಂದ, ೨೨ ರೂಪಾಯಿ ಬರುತ್ತಿತ್ತು. ಅಲ್ಲದೆ ಸುಮ್ಮನೆ ಕೂತಿರಲಾರದೆ ತಾನೂ ಕೂಲಿಕುಂಬಳಿಗೆ ಹೋಗುತ್ತಲೆ ಇದ್ದಳು. ಒಂದು ಹೊಟ್ಟೆ ಕಳೆಯಲು, ಹಳ್ಳಿಯಲ್ಲಿ ಎಷ್ಟಾದರೂ ಹಣ ಬೇಕಾದೀತು? ಹೀಗಾಗಿ ಅವಳಲ್ಲಿ ಕೆಲವೊಂದು ಹಣ ಕೂಡಿಬಿದ್ದಿತ್ತು. ಈಗ ಮನೆಗೆ ಮರಳಿದ ಮೇಲೆ ಏನೇನು ಲೆಕ್ಕ ಎಂದು ಅವನು ಕೇಳಿದರೆ ಹೇಳಬರಬೇಕಲ್ಲವೆ? ಅದಕ್ಕಾಗಿ ಆ ಸಂಜೆ ಹುಣಸೆಪಕ್ಕದ ರಾಶಿಯನ್ನು ಹರವಿ ಕೊಂಡು ಲೆಕ್ಕಮಾಡಿದಳು.

ವೆಚ್ಚವಾದ ಹೆಚ್ಚು ಭಾಗವೆಂದರೆ, ಮುಂದಿಗೆ ಕೊಟ್ಟ ಕೈಗಡ! ಮತ್ತೆ, ಹರಕುಮುರುಕಾಗಿ, ಬೀಳಲಿದ್ದ ಮನೆಗೆ ನಲವತ್ತು ರೂಪಾಯಿ ವೆಚ್ಚಮಾಡಿ, ಹೋದ ತಿಂಗಳವೇ ಮಲ್ಲತುಂಬಿ ಮಾಡಿಸಿದ್ದಳು. ಅದನ್ನು ನೋಡಿ, ಕೂಳಿ ಗಿಲ್ಲದೆ 'ಗರಡಿಮನೆ ಗರಡಿಮನೆ' ಎಂದು ಎಲ್ಲ ಹೊತ್ತನ್ನೂ ಅಲ್ಲಿಯೇ ಕಳೆದೂ, ಪಿರಿಪಿರಿ ತಿರುಗಿಯೋ ಕಾಲಕಳೆಯುವ ಹನುಮನ ಮನೆಯೋ ಇದು! ಎಂದು ಊರವರೇ ಆಶ್ಚರ್ಯಪಟ್ಟಿದ್ದರು. ಇನ್ನು ಉಳಿದ ವೆಚ್ಚಗಳಲ್ಲಿ ಅವನ ಮೆಚ್ಚಿಸ ಬಹುದಾದುದೆಂದರೆ, ಹೋದ ವರ್ಷವೇ ಅವನು ರಜೆಗೆ ಬರುವೆನೆಂದು ತಿಳಿಸಿದ್ದ ಕಾರಣ, ಆ ವರ್ಷದ ಜಾತ್ರೆಯಲ್ಲಿ, ಎರಡು ಗಾದಿಗಳನ್ನು ಮಾಡಿಸಿದ್ದುದು! ಮತ್ತು ಕಟ್ಟಿಗೆಯ ಮುರುಕು ಮಂಚವನ್ನು ಅಷ್ಟರಮಟ್ಟಿಗೆ ರಿಪೇರಿಮಾಡಿಸಿ ದುದು! ಆದರೆ ಆಗ ಅವನು ಬರಲಿಲ್ಲ, ತಿರುಗಿ ಅವನ ಸುದ್ದಿಯೂ ಇರಲಿಲ್ಲ . . ಈಗ ಮೇಲೆ ಕಟ್ಟಿ ಇಟ್ಟಿದ್ದ ಅವುಗಳನ್ನು ಹೊರತೆಗೆದು ಜಾಡಿಸಿ ಇಡಬೇಕಾ ಯಿತು. ಆದರೆ ಅವುಗಳ ಬುಡದಲ್ಲಿ ಹಾಸಲು ಅವಕ್ಕೆ ತಕ್ಕುವಾದ ಜಮುಖಾನೆ ಗಳು ಇರಲಿಲ್ಲ. ಇದ್ದುದು ಒಂದು ತೀರ ಹಳೆಯ ಹರಕು ಕಂಬಳಿ, ಅದರಲ್ಲಿ ಹೇಗೆ ಅವುಗಳನ್ನು ಸುತ್ತಿ ಇಡುವುದು? ಕೊನೆಗೆ ಮಂಚದ ಮೇಲೆ ಹಾಸಿಯೇ ಇಡಬೇಕೆಂದುಕೊಂಡಳು.

ಇನ್ನು ಕೆಲ ಸಣ್ಣ ವಿಷಯಗಳಿಗೂ ಗಮನಕೊಟ್ಟು ಆಸ್ಥೆಯಿಂದ ಪೂರೈಸಿದಳು. ಇವತ್ತೇ ಸಾರಿಸಿದೆಯಾದ್ದರಿಂದ, ಆ ವಾಸನೆ ಕಡಿಮೆಯಾಗಲು ನಾಳೆಗೆ ಊದಿನ ಕಡ್ಡಿಗಳನ್ನು ಹಚ್ಚಬೇಕಲ್ಲ. ಪೇಟೆಗೆ ಹೋಗಿ, ಊದಿನ ಕಡ್ಡಿ ಗಳನ್ನೂ, ಮತ್ತೆ ಏನೇನು ಸಾಮಾನು ಬೇಕೆನಿಸಿತೊ ಅವೆಲ್ಲವನ್ನೂ ತಂದಳು.

ರಾತ್ರಿಗೆ ಜಡೆಗಟ್ಟಿದ ಕೂದಲಿಗೆ ಎಣ್ಣೆ ಹೂಸಿ ಎರೆದುಕೊಳ್ಳುತ್ತಿರುವಾಗ, ಅವಳಿಗೆ ಇನ್ನೊಂದು ವಿಚಾರ ಬಂತು. 'ಆತ ಕುರ್ಚಿಯ ಮೇಲೆ ಕುಳಿತು ಕೊಂಡು ನಾನು ಊಟಮಾಡುವುದು' ಎಂದು ಸುರುವಾತಿನ ಒಂದು ಪತ್ರದಲ್ಲಿ ಸಹಜವಾಗಿ ಕಾಣಿಸಿದ್ದ. 'ಈಗೂ ಕುರ್ಚಿಯ ಮೇಲೆ ಕುಳಿತರೆಯೇ ಅಂವಗೆ ಊಟ ಪಸಂದ ಏನೋ! ಕುರ್ಚಿಯನ್ನು ಎಲ್ಲಿಂದ ತರಲಿ' ಎಂದುಕೊಂಡಳು. ಕೊನೆಗೆ ಅವಸರದಲ್ಲಿ ಮೈಮುಗಿಸಿ, ವಾಸಪ್ಪನವರ ಮನೆಗೋಡಿ, ಏನೇನೊ ನೆವ ಹೇಳಿ, ಹಳೆಯ ಕಬ್ಬಿಣ ಕುರ್ಚಿಯೊಂದನ್ನು ತಂದಳು. ಆದರೆ ಒಂದು ಮೇಜೂ ಬೇಕಾದೀತೆಂಬ ವಿಚಾರ ಅವಳಿಗೆ ಬರದಿದ್ದರೆ ಅಚ್ಚರಿಯೇನಲ್ಲ.

'ಬೇಗನೇ ಏಳಬೇಕು, ಅಡುಗೆಯನ್ನು ಮುಗಿಸಬೇಕು' ಎಂದುಕೊಂಡಿದ್ದ ಅವಳಿಗೆ ತಾನು ಗೊತ್ತುಮಾಡಿಕೊಂಡ ವೇಳೆಗಿಂತ ಮುಂಚೆಯೇ ಎಚ್ಚರ ವಾಯಿತು. ನಾಲ್ಕು ವರ್ಷದ ಹಿಂದೆ ಅವನಿಗೆ ಪ್ರಿಯವಾಗಿದ್ದ ತಿನಿಸುಗಳನ್ನು ಅವಳು ನೆನಪು ತಂದುಕೊಳ್ಳಬೇಕಾಯಿತು.

ಅಡುಗೆ ಮುಗಿದು ಹೋದರೂ ಇನ್ನೂ ಎರಡು ಗಂಟೆಗಳ ಕಾಲದ ಅವಧಿಯಿದೆ. ಮೋಟಾರು ಬರಲು, ಊರಹೊರಗಿರುವ ಇವರ ಮನೆ ಮುಂದಿನ ಆಲದ ಮರದ ನೆರಳಲ್ಲೇ ಮೋಟರು ಮೊದಲಿಗೆ ನಿಲ್ಲುವುದರಿಂದ, ಬೇರೆಲ್ಲಿಗೂ ಆಕೆ ಹೋಗಬೇಕಾಗಿಲ್ಲ. ಇನ್ನೊಂದು ವಿಚಾರ ಮಿಂಚಿತು, 'ಇಲ್ಲಿಂದ ತುಸು ಮುಂದೆ, ಎಂದರೆ ಮುಕ್ಕಾಲು ಮೈಲು ದೂರದಲ್ಲಿರುವ ಚಿಕ್ಕ ಮೈಲಾರದ ವರೆಗೂ ನಡೆದು ಹೋಗಿ, ಅಲ್ಲಿಯೇ ಅವನನ್ನು ಎದುರುಗೊಳ್ಳ ಬಹುದಲ್ಲ!' ಅವಳ ಮನಸ್ಸು ತುರಿಕೆದ್ದಿತು. ಆದರೆ ಮೋಟಾರಿನಲ್ಲಿಯ ಮಂದಿ ನಗಬಹುದು. ನಕ್ಕರೆ ನಗಲಿ. ಗುರುತಿನವರಾದರೂ ಎಷ್ಟು ಜನ ಇದ್ದಾರು? ಡ್ರಾಯವ್ಹರ ನಬಿ ಬಹಳಷ್ಟು ಹಾಸ್ಯ ಮಾಡಬಹುದು.... ಇಷ್ಟಕ್ಕೂ 'ಅವನೇ' ಇರುವನಲ್ಲ' ಎಂದು ಅಂದುಕೊಂಡಳು.

ಅವಳ ತಾಳ್ಮೆಯನ್ನು ಚೆನ್ನಾಗಿ ಕಾಯಿಸಿ, ಮೋಟಾರು ತನ್ನ ಬರವನ್ನು ಸೂಚಿಸಿತು. ಅವಳನ್ನು ಕಂಡೊಡನೆಯೇ ಮೋಟಾರು ಅಲ್ಲಿಂದಲೇ ನಿಲ್ಲುತ್ತ ಬಂದಿತು. ಇಷ್ಟಗಲ ಮುಖ ಹಿಗ್ಗಿಸಿ, ಬಸ್ಸಿನಲ್ಲಿ ಆಕೆ ನೋಡತೊಡಗಲು, ನಬಿಯು ಗಟ್ಟಿಯಾಗಿ ನಗತೊಡಗಿದ, 'ನಿನಗಿಂತ ಮೊದಲೇ, ನಿನ್ನ ಗಂಡ ಇಳಿದು ಹೋಗಿದ್ದಾನೆ, ನಾ ಹೇಳಿದರೆ ಕೇಳಲಿಲ್ಲ. ಸಾಮಾನು ಮಾತ್ರ ಇಲ್ಲೆ ಅವ. 'ದೋಣಿಗೇರ' ಹೊಲದ ಮುಂದಿನ ನೇಳುದಾರಿ ಹಿಡಿದು ಓಡಿದ' ಎಂದನು.

ಹೊನ್ನಿಗೆ ಬಹಳ ಆಶಾಭಂಗವಾಯಿತು. 'ಆಗಲಿ' ಎಂದುಕೊಂಡು, ನಬಿಯು 'ಮೋಟರಿನಲ್ಲಿ ಬರತೀಯು' ಎಂದು ಕರೆದರೂ ಕೇಳದೆ, ಅದೇ ನೇಳು ದಾರಿ ಹಿಡಿದು ಲಗುಬಗೆಯಿಂದ ಹೊರಟಳು.

ಅವಳಿಗೆ ಮುಂಚೆಯೇ ಹನುಮ ಮನೆ ಮುಟ್ಟಿರಬೇಕು. ಸುಣ್ಣ ಕೆಮ್ಮಣ್ಣಿನ ಪಟ್ಟಿಗಳಿಂದಲೂ, ಮುಂಭಾಗದ ಚಪ್ಪರದಿಂದಲೂ ಕೂಡಿದ ತನ್ನ ಹೊಸ ಮನೆಯನ್ನು ಕಂಡಿರಬೇಕು. ಬಾಗಿಲು, ಮುಂದೆ ಮಾಡಿದುದನ್ನು ಕಂಡು ಕಿಟಿಕಿಯಲ್ಲಿ ಹಣಿಕಿ ಹಾಕಿರಬೇಕು. ಅಲ್ಲಿ ಮಂಚ, ಎರಡು ಹಾಸಿದ ಗಾದಿ, ಸ್ವಚ್ಛವಾಗಿದ್ದ ನೆಲ, ಜಾತ್ರೆಯಲ್ಲಿ ಹೊನ್ನಮ್ಮ ತಂದ ಹೊಸ ಹೊಸ ಸಾಮಾನುಗಳು, ಊದಿನಕಡ್ಡಿಯ ಸುವಾಸನೆ, ಕುರ್ಚಿ, ಏನೆಲ್ಲ ನೋಡಿ, ಕಾನಪೂರದ ಸಂದಿಯೋಣಿಯಲ್ಲಿ ನಾವು ಕಂಡ ಇಂಥದೇ ಒಂದು ಕೋಣೆಯನ್ನು ಆತ ನೆನೆದುಕೊಂಡಿರಬೇಕು.

ಹೊನ್ನಿ ಚವರನ್ನು ಹರಿಸುತ್ತ ಮನೆಗೆ ಮರಳಿದಾಗ, ಬಾಗಿಲು ತೆರೆದಿತ್ತು. ಒಳಗೆ ಹುಡುಕಾಡಿದಳು—ಹನುಮುಸಿರಲಿಲ್ಲ. ಹೊರಬಂದಳು—ಮಗ್ಗಲಿನ ಬೈಲಲ್ಲಿ ಗೊಬ್ಬರ ಸೋಸುತ್ತ ಇದ್ದವನನ್ನು ಕೇಳಿದಳು. ಅದಕ್ಕೆ ಅವನು 'ಈ ಕಡೆ ಹೋದದ್ದನ್ನು ಮಾತ್ರ ನೋಡಿದೆ' ಎಂದನು.

ಹೊನ್ನಮ್ಮ ಅಲ್ಲಿಂದ ಶಾನಭೋಗರ ಮನೆಗೆ ಓಡಿದಳು. ವಾಸಪ್ಪನವರ ಮನೆಗೂ ಹೋದಳು. ಬಿಸಿಲಲ್ಲಿ ಊರಲೆಲ್ಲ ತಿರುಗಿದಳು—ಸಿಕ್ಕಲಿಲ್ಲ. ಸಂಜೆಗೆ ಹೊಲದಿಂದ ಮರಳಿದ ಮುರುಡಪ್ಪನು 'ನೆಗಳೂರ ರಸ್ತೆಯ ಕಡೆಗೆ ಕಂಡ ಹಾಗಿತ್ತು' ಎಂದನು. ಶಾನಭೋಗರು ಅಲ್ಲಿಗೂ ಆಳನ್ನು ಬಿಟ್ಟಾಯಿತು.

ಮರುದಿನ ಆಕೆ ಅಷ್ಟೇ ಆಸೆಯಿಂದ ಅವನಿಗಾಗಿ ಕಾದಳು. ಒಂದು ವಾರದ ವರೆಗೂ ಕಾದಳು. ತಿಂಗಳೂ ಕಳೆಯಿತು. ವರ್ಷ ಕೂಡ. ಈಗೂ ಕಾಯುತ್ತಿದ್ದಾಳೆ.

ಹನುಮ, ಇದನ್ನೋದಿಯಾದರೂ ಮನೆಗೆ ಮರಳಿ ಬರಲಾರೆಯಾ?

[ಎಂಡ್ರು ಮರುವಾರ 'Prisoners' Return' ಎಂಬ ಕತೆಯ ನೆರಳಲ್ಲಿ.]



# ಬಂಧನದಲ್ಲಿ!

ಪ. ಸು. ಭಟ್ಟ

ಕೊನೆಗೊಮ್ಮೆ ಗಡಿಯಾರದ ಸಣ್ಣಮುಳ್ಳು ಐದರ ಮನೆಯನ್ನು ದಾಟಿತು. 'ಉಶ್ಯ್' ಎಂದು ನಿಟ್ಟುಸಿರು ಬಿಡುತ್ತ ವೀರಯ್ಯ ಲೆಕ್ಕಣಿಯನ್ನು ಕೆಳಗಿಳಿಸಿದ. ಅವನಂತೆಯೇ ಉಳಿದ ನಾಲ್ಕೈದು ಜನರೂ ಕೆಲಸವನ್ನು ಮುಗಿಸಿ ಮನೆಯ ವಿಚಾರ ಮಾಡಹತ್ತಿದರು. ವೀರಯ್ಯ ಮನೆಗೆ ಹೊರಡಲು ಎದ್ದುನಿಂತ. ನಿಲ್ಲುವ ಶಕ್ತಿ ಕೂಡ ಇರಲಿಲ್ಲ. ಹೃದಯ ಭಾರವಾಗಿತ್ತು. ಕಣ್ಣು ಉರಿಯುತ್ತಲಿತ್ತು. ಇನ್ನು ಅವನು ಮನೆಗೆ ಹೋಗಬೇಕು. ನಿಜ — ಮೂರು ಜೀವಿಗಳು ಅವನಿಗಾಗಿ ಅಲ್ಲಿ ಕಾದಿರುತ್ತವೆ. ಪತ್ನಿ ಸುಶೀಲ ಮತ್ತು ಎರಡು ಹುಡುಗರು — ಶಾಂತಾ ಮತ್ತು ಪ್ರಭು! ಎಂತಹ ಕಷ್ಟವಾದರೂ ನಗು ನಗುತ್ತ ಸ್ವಾಗತಿಸುತ್ತಾಳೆ ಶೀಲೆ! ಬಿಸಿ ನೀರನ್ನು ತಂದು ಕಾಲುಮೊಳೆಯಲು ಮುಂದಿಡುತ್ತಾಳೆ. ಎಂತಹ ಕೊರತೆಯಿದ್ದರೂ ನೀರಿಗೇನು ಕೊರತೆಯಿಲ್ಲವಲ್ಲ. ಆದರೆ ಶಾಂತಾ ಪ್ರಭು ಮಾತ್ರ ಸುಮ್ಮನಿರಲಾರರು. 'ತಿನ್ನಲು ಬೇಕು ಅಪ್ಪಾ' ಎಂದು ಅರಚದೆ ಬಿಡುವವರಲ್ಲ. ತಾಯಿ ಎಷ್ಟು ಸುಮ್ಮನಿರಿಸಲು ಯತ್ನಿಸಿದರೂ ಸುಮ್ಮನಿರಲಾರರು. ಹೊಟ್ಟೆ ಕೇಳುವದಿಲ್ಲ. ಪಾಪ! ಪ್ರಪಂಚದ ಸುಖದುಃಖ ಹೇಗೆ ಗೊತ್ತಾಗಬೇಕು? ಬೆವರು ಹರಿಸಿ — ಜೀವ ಹಣ್ಣು ಮಾಡಿಕೊಂಡು ವೀರಯ್ಯ ಅವರಿಗಾಗಿ ದುಡಿಯಬೇಕು. ತನ್ನ ಬೆವರು ರಕ್ತಗಳಿಂದ ಅವರನ್ನು ಪೋಷಿಸಬೇಕು; ಪೋಷಿಸಿ ಬೆಳೆಸಬೇಕು. ಸಮಾಜವನ್ನೆದುರಿಸುವ ಹೊಸ ಹುಲಿಗಳನ್ನಾಗಿ ಮಾಡಬೇಕು ಅವರಿಬ್ಬರನ್ನು!

ವೀರಯ್ಯ ವಿಚಾರ ಮಾಡುತ್ತ ಆಫೀಸನ್ನು ದಾಟಿ ಮನೆಯ ಮಾರ್ಗವನ್ನು ಹಿಡಿದ. ಎರಡೂ ಬದಿಗೆ ದೊಡ್ಡ ದೊಡ್ಡ ಅಂತಸ್ತಿನ ಮನೆಗಳು ಸಾಲು ಸಾಲಾಗಿ ನಿಂತಿದ್ದವು. ಲಕ್ಷ್ಮಿ ವಾಸವಾಗಿದ್ದಳಲ್ಲಿ. ಎರಡೂ ಕಡೆಗಳಿಂದ

ಗ್ರಾಮೋಫೋನಿನ ಗಾಯನಗಳು ಹವೆಯಲ್ಲಿ ತೇಲಿಬಂದು ವೀರಯ್ಯನ ಕಿವಿಗಳನ್ನಪ್ಪಳಿಸುತ್ತಿದ್ದವು. ಸಂಗಡಲೇ ಅಲ್ಲಿನ ನಗೆ, ಹಾಡು – ಕೋಲಾಹಲ! ದೊಡ್ಡ ದೊಡ್ಡ ಚಹಾದ ಅಂಗಡಿಗಳು ಗಿರಾಕಿಗಳನ್ನು ಸ್ವಾಗತಿಸುತ್ತಿದ್ದವು. ಆದರೆ ಹಣವಂತರಿಗೆ ಮಾತ್ರ ಅಲ್ಲಿ ಪ್ರವೇಶ. ನಾನಾ ತರದ ತಿನ್ನುವ ಪದಾರ್ಥಗಳನ್ನಿಟ್ಟಿದುದು ಅಲ್ಲಿ ಕಾಣಿಸುತ್ತಿತ್ತು. ಆದರೆ ಅದು ಕನ್ನಡಿಯ ಗಂಟು.

ರಾಜಮಾರ್ಗವನ್ನು ಬಿಟ್ಟು ಸಣ್ಣ ಗಲ್ಲಿಯನ್ನು ಹಿಡಿದು ವೀರಯ್ಯ ಸಾಗಿದ. ಅಲ್ಲಿ ಬಡವರ – ದುಡಿಯುವವರ ಮನೆಗಳೇ ಹೆಚ್ಚಾಗಿದ್ದವು. ಬೆಳಗಿನಿಂದ ಸಂಜೆಯ ವರೆಗೆ ದುಡಿದು ಬರುವ ಕಾರ್ಮಿಕರ ಮನೆಗಳು ಸಾಲು ಸಾಲಾಗಿದ್ದವು. ವೀರಯ್ಯ ಒಬ್ಬ ಕಾರಕೂನ; ಆದರೆ ಕಾರ್ಮಿಕ. ಅವನೂ ಅದೇ ಸಾಲಿನವನೇ! ಅದಕ್ಕಾಗಿ ಅವನ ವಾಸವೂ ಅವರ ಮಧ್ಯದಲ್ಲಿಯೇ! ಗಾಯನ–ನಗೆ–ಉಲ್ಲಾಸ ಯಾವುದೂ ಇಲ್ಲಿರಲ್ಲಿಲ್ಲ. ಎಲ್ಲರ ಮುಖದಲ್ಲೂ ಚಿಂತೆ ಕಳವಳ.

ವೀರಯ್ಯ ಇಲ್ಲಿ ಬರುವದಕ್ಕಿಂತ ಮುಂಚೆ ಅದೆಷ್ಟೋ ಕನಸು ಕಟ್ಟಿದ್ದ. ತನ್ನ ಜೀವನ ಹಾಗಾಗುವದು – ಹೀಗಾಗುವದು ಎಂದು ನಂಬಿದ್ದ. ಮೆಟ್ರಿಕ್ಲೇಶನ್ ಪಾಸಾಗಿ ಗುಮಾಸ್ತೆಯ ಜಾಗ ಸಿಕ್ಕುತ್ತಲೂ ಅದೆಷ್ಟು ಹಿಗ್ಗಿದ್ದ? ಮುಂಬಾಯಿ ಮಹಾನಗರ. ಅಲ್ಲಿ ತಾನು ತನ್ನ ಸುಶೀಲೆ, ಪ್ರತಿಸಿತ್ಯವೂ ಸಂಜೆ ವಿಹಾರಕ್ಕೆ ಹೋಗುವದು. ಬೇಸರ ಬಂದರೆ ಸಿನೆಮಾ–ನಾಟಕ–ನೃತ್ಯ! ಆದರೆ ಅದೆಲ್ಲ ಬರಿಯ ಕನಸಾಯಿತು. ಬರಿಯ ಎರಡು ಖೋಲಿಯಿದ್ದ ಮನೆಗೆ ಇಪ್ಪತ್ತು ರೂಪಾಯಿ ತೆರಬೇಕಾಯಿತು. ಅವನಿಗೆ ಬರುತ್ತಿದ್ದ ಪಗಾರು ಕೇವಲ ೬೦ ರೂಪಾಯಿ! ಅದರಲ್ಲಿ ಅವನ ಸಂಸಾರ ಸಾಗಬೇಕು; ಬಾಳನಾವೆ ಸಾಗಬೇಕು. ಇಬ್ಬರಿದ್ದವರು ಕೊನೆಗೆ ನಾಲ್ವರಾದರು. ಅವನ ಮೇಲೆ ಭಾರ ಹೆಚ್ಚು ಬಿದ್ದಿತು. ಆದರೆ ಆ ಭಾರವನ್ನವನು ಹೊರಲೇಬೇಕು.

ತನಗೆ ಸಿಗುವ ಅರವತ್ತು ರೂಪಾಯಿ ಸಂಬಳದಲ್ಲಿ, ಅವನು ಜೀವನ ಸಾಗಿಸಬೇಕು. ಹಣವಿದ್ದರೆ ಮಾತ್ರ ಮುಂಬಾಯಿ ಚಂದ – ಎನ್ನುವದು ಅವನಿಗೆ ತಿಳಿಯಹತ್ತಿತು.

ಆದರೆ ಹೆಂಡತಿ ಸುಶೀಲೆ ಮಾತ್ರ ಪತಿಯ ಕಷ್ಟವನ್ನರಿತುಕೊಂಡು ಇದ್ದುದರಲ್ಲೇ ಹೇಗೊ ಸಾಗಿಸಲು ಯತ್ನಿಸುತ್ತಿದ್ದಳು. ದಣಿದು ಬಂದ ಪತಿಯನ್ನು ಮಧುರ ಮಾತುಗಳಿಂದ ತೃಪ್ತಿಪಡಿಸುತ್ತಿದ್ದಳು.

ಹೆಂಡತಿ ಮಕ್ಕಳಿಗೆ ಸರಿಯಾಗಿ ಆಹಾರ, ಬಟ್ಟೆ ಪೂರೈಸಲಾಗದಿದ್ದ ಪತಿ ಇದ್ದು ಪ್ರಯೋಜನವೇನು? ಅವರಿಗೆ ಸುಖಸಮಾಧಾನವನ್ನು ಕೊಡದೆ ಕಷ್ಟದಲ್ಲಿ ಕೊಳೆಸುವದಕ್ಕಿಂತ ಲಗ್ನವಾಗದಿದ್ದರೆ ಒಳಿತಾಗಿರುತ್ತಿತ್ತು. ಒಂದು ನಾಯಿ ಸಹ ತನ್ನ ಹೊಟ್ಟೆಯನ್ನು ತಾನು ಹೊರೆದುಕೊಂಡು ಹೋಗುತ್ತಿದೆ. ಆದರೆ ಒಬ್ಬ ಪುರುಷ ಜೀವನ ನಡೆಯಿಸಲಾರನೇ? ಛೀ! ತನಗೆ ಧಿಕ್ಕಾರವಿರಲಿ ಎಂದು ವೀರಯ್ಯ ತನ್ನನ್ನೇ ತಾನು ಶಪಿಸಿಕೊಂಡ. ಹಿಂದೆ ಅದೆಷ್ಟೋ ಬಾರಿ ಅವನು ಹಾಗೆ ಅಂದುಕೊಂಡಿದ್ದ. ಈಗ ಹೇಳಿದುದು ಸಾವಿರದ ಒಂದನೆಯ ಸಲವಾಗಿರಬೇಕು.

ಮನೆ ಹತ್ತಿರ ಬಂತು. ಸುಶೀ ಯಾವನೋ ಕಸೂತಿಯನ್ನು ಹಾಕುತ್ತ ಕುಳಿತ್ತಿದ್ದಳು. ಮಕ್ಕಳಿಬ್ಬರೂ 'ಅಮ್ಮಾ ಹಸಿವು' ಎಂದು ಅಳುತ್ತಿದ್ದರು. ಅದನ್ನು ನೋಡಿ ವೀರಯ್ಯನ ಹೃದಯದಲ್ಲಿ ಕಸಿವಿಸಿಯಾಯಿತು. ಕಣ್ಣಿನಲ್ಲಿ ನೀರು ಬಂತು. 'ಸುಶೀ' ಎಂದ ವೀರಯ್ಯ.

ಪತಿ ಬಂದುದನ್ನು ಸುಶೀ ನೋಡಿರಲೇ ಇಲ್ಲ. "ಬಂದಿರಾ - ನಾನು ನೋಡಲೇ ಇಲ್ಲ" ಎಂದು ಬೇಗ ಬೇಗನೆ ಒಳಗೆ ಹೋಗಿ ಕಾಲು ತೊಳೆಯಲು ನೀರು ತಂದುಕೊಟ್ಟಳು. ಶಾಂತಾ, ಪ್ರಭು ಇಬ್ಬರು 'ಅಪ್ಪಾ – ಹಸಿವಾಗು ತ್ತದೆ' ಎಂದು ಅಳಹತ್ತಿದರು. ಬಂದ ಕೂಡಲೇ ಮಕ್ಕಳು ಹಾಗೆ ಹೇಳಿದುದ ರಿಂದ ಸಿಟ್ಟಾಗಿ ಸುಶಿ "ಏನೋ? ದಿನಕ್ಕೆ ಎಷ್ಟು ಸಾರೆ ನಿಮಗೆ ತಿನ್ನಲು ಕೊಡ ಬೇಕೋ" ಎಂದು ಕೇಳಿದಳು.

ಆದರೆ ಇಬ್ಬರು ಹುಡುಗರನ್ನು ನೋಡಿದಾಗ ಮಾತ್ರ ಸುಳ್ಳು ಹೇಳಿದೆ ಕ್ಷಮಿಸಿ ಎಂದು ಅವರೊಡನೆ ಅವಳ ಕಣ್ಣು ಮೂಕ ಸಂಭಾಷಣೆ ನಡೆಸುತ್ತಿತ್ತು. ಎಷ್ಟು ಕೃಶವಾಗಿ ಹೋಗಿದ್ದರು ಅವರಿಬ್ಬರು? ನಿಜ! ಹೊಟ್ಟೆ ತುಂಬಿಸುವುದು ಹಾಗಿರಲಿ. ಸರಿಯಾಗಿ ಆಹಾರವೇ ಸಿಗುತ್ತಿರಲಿಲ್ಲ. ವೀರಯ್ಯ ಮಕ್ಕಳನ್ನೊಮ್ಮೆ ದಿಟ್ಟಿಸಿದ. ಮತ್ತೆ ಹೆಂಡತಿಯನ್ನೊಮ್ಮೆ ನೋಡಿದ. ಇಬ್ಬರ ಕಣ್ಣಲ್ಲೂ ನೀರೂ ರಿತು. ಇಬ್ಬರ ಕಂಠಗಳೂ ಬಿಗಿದು ಬಂದವು. ಮೂಕರಂತೆ ಇಬ್ಬರೂ ಕ್ಷಣ ಹೊತ್ತು ನಿಂತರು. ಕೊನೆಗೆ ಸುಶೀ "ಹೊರಗೆಷ್ಟು ಹೊತ್ತು ನಿಂತಿರುವದು, ಒಳಗೆ ಬನ್ನಿ" ಎಂದಳು. ವೀರಯ್ಯ ಒಳಗೆ ಬಂದು ಮಕ್ಕಳಿಬ್ಬರನ್ನೂ ರಮಿಸ ಹತ್ತಿದ. ಸುಶೀ ಸಂಜೆಯ ಗಂಜಿ ಬೇಯಿಸಲು ಒಳಗೆ ಹೋದಳು.

ರಾತ್ರಿಯಾಗುವದರೊಳಗೆ ಊಟದ ಕೆಲಸ ಮುಗಿಸಬೇಕಾಗಿತ್ತು. ಇವ

ರಿದ್ದ ಮನೆಯಲ್ಲಿ ವಿದ್ಯುತ್‌ದೀಪಗಳಿರಲಿಲ್ಲ. ಇನ್ನಾವ ದೀಪ ಉರಿಸುವ ಶಕ್ತಿಯೂ ಅವರಲ್ಲಿರಲಿಲ್ಲ. ಸುಶೀ ಬೇಗನೇ ಗಂಜಿಮಾಡಿ ಬೇಯಿಸಿ, ಬಡಿಸಿದಳು. ಒಬ್ಬೊಬ್ಬರಿಗೆ ಐದು ಸೌಟು ಗಂಜಿ! ಸರಿ – ಮರುದಿನ ಮಧ್ಯಾಹ್ನದ ವರೆಗೆ ಅವರು ಅದರಲ್ಲಿ ಜೀವ ಹಿಡಿದಿರಬೇಕು.

"ಇನ್ನೆರಡೇ ದಿನ ಸಾಲುವಷ್ಟು ಅಕ್ಕಿಯಿದೆ" ಎಂದಳು ಸುಶಿ – ರಾತ್ರಿ ಮಲಗುವಾಗ. ವೀರಯ್ಯ ಯೋಚಿಸಿದ. ತಿಂಗಳು ಮುಗಿಯಲು ಇನ್ನೂ ಎಂಟು ದಿನವಿದೆ! ಮುಂದೆ ಆರು ದಿವಸ ಏನು ಮಾಡಬೇಕು? ಸಾಲವಂತೂ ತನಗೆ ಎಲ್ಲಿಯೂ ಸಿಗುವಂತಿಲ್ಲ. ಹಾಗಾದರೆ ಏನು ಮಾಡಬೇಕು?

ಸುಶೀ – ಮಕ್ಕಳಿಬ್ಬರನ್ನು ಮಲಗಿಸಿ 'ಏನು ಯೋಚಿಸುತ್ತೀರಿ? ಮಲಗಿಕೊಳ್ಳಿ. ನಾಳಿನದು ನಾಳೆ' ಎಂದಳು. ಅವಳ ಮನಸ್ಸು ನೋಯಿಸಬಾರದೆಂದು ವೀರಯ್ಯ ಮಲಗಿಕೊಂಡ. ಅವಳಿಗೆ ಬೇಗನೆ ನಿದ್ರೆ ಬಂದಿತು. ಆದರೆ ವೀರಯ್ಯನಿಗೆ ನಿದ್ರೆ ಬರಲಿಲ್ಲ. ಅವನಲ್ಲಿ ಒಂದೇ ಸವನೆ ವಿಚಾರ ನಡೆದಿತ್ತು-ಏನು ಮಾಡಬೇಕೆಂದು ಯೋಚಿಸುತ್ತಲಿದ್ದ. ಕೊನೆಗೆ ಅವನಿಗೊಂದು ಯೋಚನೆ ಹೊಳೆಯಿತು.

ನಿಜ! ಅದೇ ಉಪಾಯ. ಸರಕಾರವನ್ನು ಬಗ್ಗಿಸುವ ಉಪಾಯ ಅದೊಂದೆ! ಸಂಪು. ತಮ್ಮ ಪಗಾರವನ್ನು ಹೆಚ್ಚಿಸುವ ವರೆಗೆ ಕೆಲಸ ಮಾಡದೆ ಲೆಕ್ಕಣಿಯನ್ನು ಕೆಳಗಿಡುವದು. ಸರಕಾರ ಕೊನೆಗಾದರೂ ನಮ್ಮ ಬೇಡಿಕೆ ಮನ್ನಿಸಲೇ ಬೇಕು ಅಹಿಂಸೆಯಿಂದಲೇ ಕಾರ್ಯ ಪ್ರಾರಂಭಿಸುವದು. ಕೊನೆಗೆ ಉಪವಾಸ ಮುಷ್ಕರ ಹೂಡಿಯಾದರೂ ನಮ್ಮ ಬೇಡಿಕೆಗೆ ಜಯಸಿಗುವಂತೆ ಮಾಡಲೇಬೇಕು. ಹೊಟ್ಟೆಗೆ ಸರಿಯಾಗಿ ಹಿಟ್ಟು ಸಿಗುವಂತೆ ಯತ್ನಿಸಲೇಬೇಕು. ಆದರೆ ಇದಕ್ಕೆ ಎಲ್ಲರೂ ಒಪ್ಪಬಹುದೇ? ನನಗೇನೂ ಎಲ್ಲ ಕಾರಕೂನರ ಪರಿಚಯವಿಲ್ಲ. ಕೇವಲ ನಾಲ್ಕೈದು ಜನ ತನ್ನ ಸಂಗಡಿದ್ದವರ ಮಾತ್ರ ಗೊತ್ತು; ಅವರಿಗೆ ಹೇಳುವದು. ಕೊನೆಗೆ ಕಾರಕೂನರ ಸಂಘದ ಸಭೆ ಕೂಡಿದಾಗ ಒಂದು ಸೂಚನೆ ತರುವದು. ಸರಿ; ಅದೇ ಉಪಾಯ!

ವೀರಯ್ಯ ಸಂತೋಷದಿಂದ ನಿದ್ದೆ ಹೋದ. ಕನಸಿನಲ್ಲಿಯೂ ಮುಷ್ಕರದ ಚಿತ್ರವನ್ನು ಕಂಡ. ಕಾರಕೂನರ ಸಭೆ, ಮೆರವಣಿಗೆಗಳನ್ನೆಲ್ಲ ನೋಡಿದ. ಸರಕಾರ ಮಣಿದು ಹೆಚ್ಚಿನ ಪಗಾರು ಮಂಜೂರು ಮಾಡಿತು. ಆದುದರಿಂದ ಸಂಸಾರನಾವೆ ಸರಿಯಾಗಿ ಸಾಗಿದುದು ಮೊದಲಾಗಿ ಹಲವು ಚಿತ್ರ ಕಂಡ.

ಕಣ್ಣು ತೆರೆಯುವಾಗ ಆಗಲೇ ಬೆಳಕು ಹರಿದಿತ್ತು.

*   *   *   *

ವೀರಯ್ಯನ ಪ್ರಯತ್ನದಿಂದ ಕಾರಕೂನರ ಸಂಘ ಮತ್ತೆ ಚೇತರಿಸಿ ಕೊಂಡಿತು. ಅನೇಕರಿಗೆ ಅದನ್ನು ಮತ್ತೆ ಪುನರ್ಘಟಿಸಬೇಕೆಂಬ ವಿಚಾರವೂ ಹೊಳೆದಿತ್ತು. ಎಲ್ಲ ಕಾರಕೂನರೂ ಸಭೆ ಕೂಡಿದರು; ಅವರೊಟ್ಟು ೬೦೦ ಜನರಿದ್ದರು. ಆ ಮಹಾಸೇನೆಯನ್ನು ನೋಡಿ ವೀರಯ್ಯನಿಗೆ ಚೈತನ್ಯ ಬಂದಂ ತಾಯಿತು. ನಾನೊಬ್ಬನಲ್ಲ – ನನ್ನಂತಹ ಸಾವಿರಾರು ಮಂದಿ ಬಾಂಧವರಿದ್ದಾರೆ ಎಂದವನಿಗೆ ಅನಿಸಿತು. ತೋಳುಗಳಲ್ಲಿ ಶಕ್ತಿ ಹೆಚ್ಚುತ್ತಿರುವಂತೆ ಭಾಸವಾಯಿತು.

ಎಲ್ಲ ಕಾರಕೂನರಿಗೂ ಅನಿಸಿತ್ತು, ತಮಗೆ ಕೊಡುವ ಸಂಬಳ ಸಾಲದು. ಧಾನ್ಯ ತುಟ್ಟಿಯಾಗಿದೆ. ಇದರಿಂದ ತಮ್ಮ ಜೀವನ ಸಾಗುವದಿಲ್ಲ ಎಂದು. ಆದರೆ ಸರಕಾರದ ವಿರುದ್ಧ ಹೋಗಲು ಯಾರೂ ಸಿದ್ಧರಿರಲಿಲ್ಲ. ಸಭೆ ಕೂಡಿ ದಾಗ ವೀರಯ್ಯ ಒಂದು ಚಿಕ್ಕ ಭಾಷಣ ಮಾಡಿದ: “ನಾವು ಸರಕಾರದ ದ್ರೋಹಿ ಗಳಲ್ಲ. ನಾವು ಕೇವಲ ನಮ್ಮ ಹೊಟ್ಟೆಗಾಗಿ ಹೋರಾಡುತ್ತೇವೆ. ನಮಗೆ ಸಾಕಾಗುವಷ್ಟು ಹೊಟ್ಟೆಗೆ ಕೊಟ್ಟರೆ ಸಾಕು. ನಾವು ಇನ್ನೇನನ್ನೂ ಬೇಡುವ ದಿಲ್ಲ. ನಮಗೂ ಜೀವವಿದೆ. ನಾವೇನು ಸನ್ಯಾಸಿಗಳಲ್ಲ. ನಮಗೂ ಹೆಂಡಿರೂ ಮಕ್ಕಳಿದ್ದಾರೆ” ಎಂದು.

ಮೊದಲು ಸರಕಾರವನ್ನು ಪಗಾರು ಹೆಚ್ಚಿಸಲು ಕೇಳಿಕೊಳ್ಳಬೇಕೆಂದೂ, ಸರಕಾರ ಬೇಡಿಕೆಯನ್ನು ಮನ್ನಿಸದಿದ್ದರೆ ಸಂಪಿನ ಕ್ರಮ ತೆಗೆದುಕೊಳ್ಳಬೇ ಕೆಂದೂ ನಿರ್ಧರಿಸಲಾಯಿತು. ಅದರಂತೆ ಸರಕಾರಕ್ಕೆ ಮನವಿಯನ್ನರ್ಪಿಸಿದರು. ಆದರೆ ಸರಕಾರ ಇವರ ಬೇಡಿಕೆಯ ಕಡೆಗೆ ಲಕ್ಷ್ಯ ಕೊಡಲಿಲ್ಲ. ಸಂಘದ ಗೆಳೆ ಯರ ಸಹಾಯದಿಂದ ಅಂತೂ ವೀರಯ್ಯ ಆ ತಿಂಗಳನ್ನು ಕಳೆದ. ಆದರೆ ಪ್ರತಿ ಸಲವೂ ಅವರಿಂದ ಹಣ ತೆಗೆದುಕೊಳ್ಳುವುದು ಶಕ್ಯವಿರಲಿಲ್ಲ. ಅವರೂ ಇವ ನಂತಹವರೇ ಆಗಿದ್ದರು.

ಸರಕಾರದ ಕೃತಿಯಿಂದ ಅತೃಪ್ತಿಯುಂಟಾಯಿತು. ತಮ್ಮ ಸರಕಾರ ಹೀಗೆ ಮಾಡುವುದೆಂದು ಅವರು ಭಾವಿಸಿರಲಿಲ್ಲ. ಕೊನೆಗೆ ತಾವು ಸಂಪನ್ನೂ ಹೂಡುವರಾಗಿ ನೋಟೀಸು ಕೊಟ್ಟರು. ‘ಸಂಪು ಹೂಡುವವರು ದೇಶದ್ರೋಹಿ ಗಳು’ ಎಂದು ಸರಕಾರ ಹೇಳಿಕೆಯಿತ್ತಿತು. ಸಂಪಿನಲ್ಲಿ ಭಾಗವಹಿಸಿದ ನೌಕರ ರನ್ನು ಮನೆಗೆ ಕಳುಹಿಸಲಾಗುವದೆಂದು ಪ್ರಕಟಿಸಲಾಯಿತು. ಇದರ ಹಿಂದೆ

ರಾಜಕೀಯ ರುದ್ರ ಹೇತುವಿದೆ ಎಂದರು ಕೆಲವರು. ಆದರೆ ಕಾರಕೂನರು ತಮ್ಮ ನಿಶ್ಚಯವನ್ನು ಬದಲಾಯಿಸಲಿಲ್ಲ. ಕೆಲವರು ಅದೇ ಸಮಯದಲ್ಲಿ ಆಹಾರ ಮುಷ್ಕರ ಹೂಡುವ ನಿರ್ಣಯವನ್ನೂ ಮಾಡಿದರು.

ಜನವರಿ ೧೦! ಅಂದು ಮಹತ್ವಾದ ದಿನ. ಕಾರಕೂನರು ತಮ್ಮ ಲೆಕ್ಕಣಿಕೆಯನ್ನು ಕೆಳಗಿಟ್ಟರು. ಎಲ್ಲರಿಗಿಂತ ಮೊದಲು ವೀರಯ್ಯ ಹೊರಗೆ ಬಂದ. ಹದಿನೈದು ಜನ ಮರುದಿನದಿಂದ ಉಪವಾಸ ವ್ರತ ಹೂಡುವುದಾಗಿ ಸಾರಿದರು. ಸರಕಾರ ಕೂಡಲೆ ಎಲ್ಲೆಲ್ಲೂ ಮಿಲಿಟರಿ ಕಾವಲನ್ನಿರಿಸಿತು. ಸಭೆ–ಮೆರವಣಿಗೆಗಳ ಮೇಲೆ ನಿರ್ಬಂಧ ಹೇರಲಾಯಿತು. ೧೪೪ನೇ ಕಲಮು ನಗರದಲ್ಲೆಲ್ಲ ಜ್ಯಾರಿಮಾಡಲಾಯಿತು. ಮರುದಿನದಿಂದ ಹದಿನೈದು ಜನರ ಉಪವಾಸ ಮುಷ್ಕರವೂ ಆರಂಭವಾಯಿತು.

ಒಂದು ದಿನವಾಯಿತು, ಎರಡಾಯಿತು; ಒಂದು ವಾರ ಕಳೆಯಿತು. ಸಂಪು ಮುಗಿಯಲಿಲ್ಲ. ಸರಕಾರ ಏನು ಮಾಡಬೇಕೆಂದು ಆಲೋಚನೆ ಮಾಡಹತ್ತಿತು. ಅವರಲ್ಲಿ ಒಡಕಿನ ಬೀಜ ಬಿತ್ತುವ ಯೋಜನೆ ಕೈಕೊಳ್ಳಲಾಯಿತು. ಹಲವರನ್ನು ಕರೆದು, 'ಮುಷ್ಕರ ಹೂಡಿದ್ದರಿಂದ ಇನ್ನುಮುಂದೆ ಕೆಲಸಕ್ಕೆ ತೆಗೆದುಕೊಳ್ಳಲಾಗುವದಿಲ್ಲ. ಆದರೆ ಕ್ಷಮೆ ಬೇಡಿದರೆ ಸೇರಿಸಿಕೊಳ್ಳಲಾಗುವುದು' ಎಂದರು. ಅವರ ಸ್ಥಳದಲ್ಲಿ ಬೇರೆಯವರನ್ನು ಭರ್ತಿಮಾಡಿಕೊಳ್ಳಲಾಗುವುದೆಂದೂ ಸಾರಲಾಯಿತು. ಇದರಿಂದ ಹಲವರು ಹೆದರಿದರು. ಕ್ಷಮೆ ಬೇಡಿ ಕೆಲಸಕ್ಕೆ ಹಾಜರಾದರು. ಅನೇಕರು ಉಪವಾಸ ಮುಷ್ಕರ ಮುರಿದರು. ಸಂಪು ಮುರಿಯುತ್ತ ಬಂದುದನ್ನು ನೋಡಿ ವೀರಯ್ಯ ಮೊದಲಾದವರು ಎಲ್ಲರಿಗೂ ತಿಳಿಸಿ ಹೇಳಿದರು. ಆದರೆ ದಿನದಿನ ಹೋದಂತೆ ಕೆಲಸಕ್ಕೆ ಹೋಗುವವರ ಸಂಖ್ಯೆ ಹೆಚ್ಚಾಯಿತು; ಸಂಪು ಮುರಿಯಿತು. ಕೊನೆಗೊಂದು ದಿನ ವೀರಯ್ಯನೂ ನಿರುಪಾಯನಾಗಿ ಮತ್ತೆ ಕೆಲಸಕ್ಕೆ ಹಾಜರಾದ!

* * * *

ಮೊದಲಿನಂತೆಯೇ ದಿನಗಳು ಆರಂಭವಾದವು. ತಿಂಗಳಲ್ಲಿ ಅರ್ಧ ದಿವಸ ಅರೆಹೊಟ್ಟೆ ಉಂಡು ಉಳಿದರೂ ಮತ್ತೆ ಕೆಲದಿನಗಳು ಉಪವಾಸವಿರಲೇ ಬೇಕಾಗುತ್ತಿತ್ತು. ಇದರಿಂದ ವೀರಯ್ಯ ತುಂಬ ನೊಂದುಕೊಂಡ. 'ಏನು ಮಾಡಬೇಕು ಸುಶೀ' ಎಂದು ಹೆಂಡತಿಯನ್ನು ಪ್ರಶ್ನಿಸುತ್ತಿದ್ದ. ಆದರೆ ಪಾಪ! ಅವಳೇನು ಹೇಳಬೇಕು?

ಒಮ್ಮೊಮ್ಮೆ ವೀರಯ್ಯನಿಗೆನಿಸುತ್ತಿತ್ತು, 'ಜಗತ್ತಿನಲ್ಲಿ ಸುಖವೆನ್ನುವದೇ ಇಲ್ಲವೇ? ಸುಖವೆಲ್ಲ ಬರಿಯ ಕನಸೇ' ಎಂದು. ಮತ್ತೊಮ್ಮೆ ಎನಿಸುತ್ತಿತ್ತು, ಕೆಲವರಿಗೆ ಮಾತ್ರ ಜಗತ್ತಿನಲ್ಲಿ ಸುಖವಿದೆ, ಸವಿಯಿದೆ ಎಂದು. ಆದರೆ ಅದು ತನ್ನಂತವರಿಗಲ್ಲ. ತನ್ನಂತವರಿಗುಳಿದಿರುವುದು ಕಷ್ಟ-ಕಷ್ಟ! ಹೋರಾಟ. ನಿಜ, ಬಾಳು ಹೋರಾಟ ಎಂದು ಅದೆಷ್ಟೋ ಬಾರಿ ಆತ ಅಂದುಕೊಂಡಿದ್ದ. ಹೋರಾಡಬೇಕು ಬಾಳಿನ ಕಷ್ಟಗಳ ವಿರುದ್ಧ! ಹೋರಾಡಿ ಜಯಿಸಬೇಕು.

ಆದರೆ ಬಾಳಿನ ಹೋರಾಟದಲ್ಲಿ ಆತ ನಿತ್ರಾಣನಾಗಿದ್ದ; ನಿರ್ಜೀವಿಯಾಗಿದ್ದ.

ವೀರಯ್ಯ ದಿನವೂ ನೋಡುತ್ತಿದ್ದ. ಆತನ ಮೇಲಿನವರು ಅವನ ಮುಂದೆಯೇ ಕಾರಿನ ಮೇಲೆ ಓಡಾಡುತ್ತಿದ್ದರು. ಅವರಿಗೆ ತಿಂಗಳಿಗೆ ೧೫೦೦ ರೂಪಾಯಿ ಸಂಬಳ. ಮೇಲಾಗಿ ಓಡಾಡಲು ಸ್ವತಃ ಸರಕಾರದ ಕಾರು! ಅಬ್ಬಾ — ಅನ್ಯಾಯವೇ ಎಂದುಕೊಂಡಿದ್ದ ವೀರಯ್ಯ. ಅವನ ಮನಸ್ಸು ರೋಸಿಹೋಗಿತ್ತು. ಅವರಿಗೆ ಕೊಡುವ ಸಂಬಳವನ್ನು ಕಡಿಮೆಮಾಡಿ ತನಗೆ ಕೊಟ್ಟರೆ ಏನಾಗುತ್ತಿತ್ತು? ಏನಾಗುತ್ತಿತ್ತು? ಆದರೆ ಅವನ ಪ್ರಶ್ನೆಗುತ್ತರ ಕೊಡುವವರು ಯಾರು?

ಒಂದು ದಿನ ವೀರಯ್ಯನಿಗೆ ಹೊಳೆಯಿತು: ಎಲ್ಲರಂತೆ ತಾನೂ ಏಕೆ 'ಲಂಚ' ತೆಗೆದುಕೊಳ್ಳಬಾರದು? 'ಲಂಚ' ಛೇ, ಅನ್ಯಾಯ! ಎಂದು ಅವನೆಷ್ಟೋ ಬಾರಿ ಅಂದುಕೊಂಡಿದ್ದ. ಆದರೆ ಈಗ ನ್ಯಾಯ ಅನ್ಯಾಯಗಳೆಲ್ಲ ಹೊಟ್ಟೆಯ ಹಸಿವೆಯ ಮುಂದೆ ಮರೆಯಾಗಿದ್ದವು. ಒಂದು ದಿನ ಅವನೆದುರಿನಲ್ಲಿಯೇ ಓರ್ವ ಹಿರಿಯ ಅಧಿಕಾರ 'ಲಂಚ' ತೆಗೆದುಕೊಂಡಿದ್ದನ್ನು ನೋಡಿದ. ೧೦೦ ರೂಪಾಯಿನ ಹತ್ತು ನೋಟುಗಳು! ವೀರಯ್ಯನ ಬಾಯಲ್ಲಿ ನೀರೂರಿತು. ಮರುಕ್ಷಣದಲ್ಲಿ ದುಃಖವೂ ಆಯಿತು.

ಆ ದಿನವಿಡೀ ವೀರಯ್ಯ ಯೋಚಿಸಿದ. ಲಂಚ ತೆಗೆದುಕೊಂಡರೆ ತಪ್ಪೇನು? ಹಿರಿಯ ಅಧಿಕಾರಿಗಳು ತೆಗೆದುಕೊಳ್ಳುವದಿಲ್ಲವೇ? ಅವರಂತೆ ತಾನೂ ಏಕೆ ತೆಗೆದುಕೊಳ್ಳಕೂಡದು? ಅಂದು ರಾತ್ರೆ ಸುಶೀಲೆಯೊಡನೆ ಪ್ರಶ್ನಿಸಿದ: 'ಲಂಚ ತೆಗೆದುಕೊಳ್ಳುವದು ಪಾಪವೇ ಸುಶೀ?'

ಪಾಪವೋ – ಪುಣ್ಯವೋ! ಸುಶೀಗೆ ತಿಳಿಯಲಿಲ್ಲ. ಅವಳು ಏನೂ ಹೇಳಲಿಲ್ಲ. ಮತ್ತೆ ತನ್ನ ಆತ್ಮಕ್ಕೆ ಪ್ರಶ್ನಿಸಿದ ವೀರಯ್ಯ 'ಲಂಚ ತೆಗೆದುಕೊಳ್ಳುವುದು ಪಾಪವೇ?'

ಯಾವುದು ಪಾಪ? ತಮಗೆ ಅರೆಹೊಟ್ಟೆ ಊಟಕ್ಕೆ ಕೊಡುವುದು ಪಾಪ ವಲ್ಲವೇ? ಬೆವರು ಹಲಿಸಿದರೂ ಹೊಟ್ಟೆತುಂಬ ಊಟಕ್ಕೆ ಕೊಡದೆ ಕೊರಗಿಸು ವುದು ಯಾವ ಪುಣ್ಯ?

ವೀರಯ್ಯನಿಗೆನ್ನಿಸಿತು. ಪಾಪ – ಪುಣ್ಯವೆಲ್ಲ ಮಾನವನ ಕಲ್ಪನೆ! ಅಂತೇ ಅವನು ಲಂಚ ತೆಗೆದುಕೊಳ್ಳುವದನ್ನೂ ನಿರ್ಧರಿಸಿದ.

* * * *

ಸಂಜೆ ಆರು ಘಂಟೆಯಾಯಿತು.

ಹಾಗೆಯೇ ನಿಮಿಷ ನಿಮಿಷಗಳು ಉರುಳಿದವು. ಕಪ್ಪು ಛಾಯೆ ಲೋಕ ವನ್ನು ಪಸರಿಸಹತ್ತಿತು.

ವೀರಯ್ಯ ಬರಲಿಲ್ಲ!

ಸುಶೀಲೆಯ ಎದೆ ಡವಡವ ಎಂದಿತು ಶಾಂತ–ಪ್ರಭು ಇಬ್ಬರನ್ನು ಕೂಡ್ರಿ ಸಿಕೊಂಡು 'ನಿಮ್ಮಪ್ಪ ಏಕಿನ್ನು ಬರಲಿಲ್ಲ' ಎಂದಳು. ಆದರೆ ಅವಕ್ಕೆ ಹೇಗೆ ಗೊತ್ತಾಗಬೇಕು?

ಕ್ಷಣ ಕ್ಷಣ ಹೋದಂತೆ ಅವಳ ಕಳವಳ ಇಮ್ಮಡಿಸಹತ್ತಿತು. ರಾತ್ರಿಯೂ ಆಯಿತು. ಮಕ್ಕಳು ಗಂಜಿಯನ್ನುಂಡು ನಿದ್ದೆಹೋದವು. ಅವಳಿಗೆ ನಿದ್ದೆ ಬರಲಿಲ್ಲ. ಹೇಗೆ ಬರಬೇಕು? ಕ್ಷಣಕ್ಷಣವೂ ಬಾಗಿಲಿಗೆ ಬಂದು ಬಿಟ್ಟಿಸು ತ್ತಿದ್ದಳು. ಆದರೆ ಬರಿಯ ಕತ್ತಲೆ! ಹೊರಗೆ ಕತ್ತಲೆ ಕವಿದಿತ್ತು. ಅವಳ ಹೃದಯ ದೊಳಗೂ ಕತ್ತಲೆ ಕವಿಯುತ್ತಲಿತ್ತು. ನಿದ್ರೆಯಿಲ್ಲದೆ – ಬೆಳಕಾಯಿತು ನಿಜ! ಆದರೆ ಅವಳಿಗೆ ಇನ್ನೂ ಕತ್ತಲೆಯಿದ್ದಂತೆ ತೋರಿತು.

ಬೆಳಿಗ್ಗೆ ಯಾವನೋ ಒಬ್ಬನು ವರ್ತಮಾನ ತಂದ ವೀರಯ್ಯ ಲಂಚ ತೆಗೆದುಕೊಳ್ಳುವಾಗ ಸಿಕ್ಕಿಬಿದ್ದು ಅವನನ್ನು ವಿಚಾರಣೆಗೆ ಗುರಿಪಡಿಸಲೋಸುಗ ಹಿಡಿದರಂತೆ. ಅವಳಿಗೆ ಏನು ಮಾಡಬೇಕೆಂದೂ ತೋಚಲಿಲ್ಲ. ಬುದ್ಧಿ ಮಂಕಾಯಿತು.

ಹಾಗೆಯೇ ಮನೆಯ ಬಾಗಿಲನ್ನು ಸಹ ಹಾಕಿಕೊಳ್ಳದೆ – ಇಬ್ಬರೂ ಮಕ್ಕಳನ್ನು ಎತ್ತಿಕೊಂಡು ಪತಿಯ ಭೆಟ್ಟಿಗಾಗಿ ಓಡಿದಳು. ಆದರೆ ಭೆಟ್ಟಿ ಸಿಗಲಿಲ್ಲ.

ಮರುದಿನ ನ್ಯಾಯಾಲಯದಲ್ಲಿ ವೀರಯ್ಯನ ವಿಚಾರಣೆಯಾಯಿತು. ವೀರಯ್ಯ ಲಂಚ ತೆಗೆದುಕೊಂಡಿದ್ದು ಅಹುದೆಂದು ಹೇಳಿದ. ಅದಕ್ಕೆ ಕಾರಣ

ವನ್ನು ಕೊಟ್ಟ. ದೊಡ್ಡ ಅಧಿಕಾರಿಗಳ ರೀತಿಯನ್ನೂ ಕೇಳಿದ. ಆದರೆ ಅವರಿಗೆ ಇವನ ಸಮರ್ಥನೆ ಬೇಕಿರಲಿಲ್ಲ. ಆರು ತಿಂಗಳು ಸಶ್ರಮ ಶಿಕ್ಷೆ ವಿಧಿಸಿದರು.

ಸುಶೀಲೆಗೆ ಅದನ್ನು ಕೇಳಲು ಆಗಲಿಲ್ಲ. ಪೋಲೀಸರು ಪತಿಯ ಕೈಗಳಿಗೆ ಬೇಡಿಯನ್ನು ತೊಡಿಸುವದನ್ನು ನೋಡಲು ಅವಳಿಗೆ ಆಗಲಿಲ್ಲ.

ವೀರಯ್ಯ ಪತ್ನಿಯ ಹತ್ತಿರ ಬಂದ. ಮಾತನಾಡಲು ಸಾಧ್ಯವಾಗಲಿಲ್ಲ. ಗಳಗಳನೆ ಅತ್ತುಬಿಟ್ಟ. "ಇನ್ನು ಆರು ತಿಂಗಳ ತನಕ ಈ ಮಕ್ಕಳನ್ನು ಸಾಕುವ ಹೊಣೆ ನಿನ್ನದು ಸುಶೀ! ನಾನು ಬರುವ ವರೆಗೆ ಇವರಿಗೆ ತೊಂದರೆಯಾಗದಂತೆ ರಕ್ಷಿಸು. ಪುಟ್ಟಯ್ಯನ ಹತ್ತಿರ ನನ್ನದೆನ್ನುವ ಒಂದು ನೂರು ರೂಪಾಯಿ ಅದೆ. ಅದನ್ನು ತೆಗೆದುಕೋ . . . ." ಮುಂದೇನೇನೋ ಹೇಳಬೇಕೆಂದಿದ್ದ ವೀರಯ್ಯ. ಆದರೆ ಅವನಿಗೆ ನುಡಿಯಲು ಸಾಧ್ಯವಾಗಲಿಲ್ಲ. ಕಂಠ ಬಿಗಿದು ಬಂತು.

"ಹೂಂ – ಬೇಗನೆ ಮಾತು ಮುಗಿಸಿ" ಎಂದರು ಪೋಲೀಸ ಅಧಿಕಾರಿ ದೂರದಿಂದಲೇ!

ವೀರಯ್ಯ ಮಕ್ಕಳಿಬ್ಬರನ್ನೂ ಮುದ್ದಿಟ್ಟ. ಅಪ್ಪಾ–ಎತ್ತಿಕೋ ಎನ್ನುವಂತೆ ಮಕ್ಕಳಿಬ್ಬರೂ ಕೈಚಾಚಿದರು. ಆದರೆ ಬಂಧನದಲ್ಲಿದ್ದ ಅವನಿಗೆ ಸಾಧ್ಯವಾಗ ಲಿಲ್ಲ. "ಹೋಗಿ ಬರುವೆ ಸುಶೀ" ಎಂದ. ದುಃಖದ ಒಡ್ಡು ಒಡೆಯಿತು. ಸುಶೀ ಅತ್ತುಬಿಟ್ಟಳು. ಕೊನೆಗೆ ಮನಸ್ಸಿನಲ್ಲಿಯೇ "ಸುಖವಾಗಿ ಬನ್ನಿ" ಎಂದು ಹಾರೈಸಿದಳು.

ವೀರಯ್ಯ – ಪೋಲೀಸರನ್ನು ಹಿಂಬಾಲಿಸಿದ. ಅಪ್ಪಾ ಎಂದು ಮಕ್ಕಳು ಮತ್ತೊಮ್ಮೆ ಕೂಗಿದವು. ವೀರಯ್ಯ ಸುಶೀಲ ಮಕ್ಕಳನ್ನೆತ್ತಿಕೊಂಡು ಕಣ್ಣೀರು ಸುರಿಸುತ್ತಿರುವದನ್ನು ಕಂಡ. ಮುಂದೆ ಅವನಿಗೆ ನೋಡಲಾಗಲಿಲ್ಲ. ಕಣ್ಣಿನಲ್ಲಿ ನೀರು ತುಂಬಿತು. ಜೇಲಿನ ಬಾಗಿಲು ತೆರೆದು ವೀರಯ್ಯನನ್ನು ಸ್ವಾಗತಿಸಿ ಮತ್ತೆ ಬಂದಾಯಿತು!



# ಮಲ್ಲಿ

ಇಂದಿರಾತನಯ

ಮಾದಣ್ಣನ ಮಗಳು ಮಲ್ಲಿ. ತಾಯಿಯಂತೆ ಚೆಲುವೆ. ವಯಸ್ಸಿಗೆ ತಕ್ಕ ತುಂಬು ಮೈ. ನೋಡುವುದಕ್ಕೆ ಅಂದವಾಗಿದ್ದಳು. ಅವಳನ್ನು ನೋಡಿ ಸಂತೋಷಪಡುವುದೇ ಅವಳ ತಂದೆ ತಾಯಿಗಳಿಗೊಂದು ಆನಂದ.

ಮಲ್ಲಿಗೆ ಮದುವೆಯ ವಯಸ್ಸು ಬಂದಾಗ, ಮಾದಣ್ಣ ನೆರೆ ಹಳ್ಳಿಗಳಲ್ಲಿ ಮಲ್ಲಿಗೆ ತಕ್ಕ ಗಂಡಸನ್ನು ಹುಡುಕಲಾರಂಭಿಸಿದ. ಅದೆಷ್ಟೋ ಗಂಡುಗಳು ಅವನ ಕಣ್ಣಿಗೆ ಬಿದ್ದವು. ಆದರೂ ಒಂದೂ ಮಾದಣ್ಣನ ಮನಸ್ಸಿಗೆ ಸರಿ ಹೋಗಲಿಲ್ಲ. ಅವನಿಗೆ ಬಹಳ ಬೇಸರಿಕೆಯಾಯಿತು. ಕಡೆಗೆ ಕನ್ನ ಹಳ್ಳಿಯ ದ್ಯಾವೇ ಗೌಡರ ಮಗ ಮರಿಯಣ್ಣನಿಗೆ ಮಲ್ಲಿಯನ್ನು ಕೊಟ್ಟು, ಮದುವೆ ಮಾಡಬೇಕೆಂದು ನಿಶ್ಚಯವಾಯಿತು. ಜೋಯಿಸರು "ಹೆಣ್ಣು ಗಂಡಿನ ಹೆಸರುಗಳ ಮೊದಲನೆಯ ಅಕ್ಷರ ಒಂದೆಯೇ ಆಗಿರುವುದರಿಂದ ಲಗ್ನ ಆಗ ಬಹುದು" ಎಂದರು. ಮಗಳಿಗೆ ವರಸಾಮ್ಯ ಕೂಡಿ ಬಂದುದನ್ನು ಕಂಡಂತೂ ಮಾದಣ್ಣನ ಹೆಂಡತಿಗೆ ಸಂತೋಷ ಹೇಳತೀರದು.

ನಿಶ್ಚಯಿಸಿದ್ದಂತೆ ಲಗ್ನ ನಡೆದು ಹೋಯಿತು. ಲಗ್ನದ ದಿನದ ರಾತ್ರಿ ಸುತ್ತುಮುತ್ತಲಿಗೆಲ್ಲ ಸುಪ್ರಸಿದ್ಧರೆಂದೆನಿಸಿದ ತಿಮ್ಮಣ್ಣದಾಸರ "ಗಿರಿಜಾ ಕಲ್ಯಾಣ" ಹರಿಕತೆಯೂ ನಡೆಯಿತು.

ಮದುವೆಯಾದ ಎರಡು ದಿನಗಳ ನಂತರ ಮಲ್ಲಿ ಗಂಡನ ಮನೆಗೆ ಹೊರಟುಹೋದಳು. ಮಾದಣ್ಣ, ಅವನ ಹೆಂಡತಿ ಸೊಕ್ಕಮ್ಮ, ತಿಮ್ಮಣ್ಣ ದಾಸರು ಮತ್ತು ಇತರ ನೆಂಟರಿಷ್ಟರೆಲ್ಲ ಮಲ್ಲಿಯನ್ನೂ, ಬೀಗರನ್ನೂ ಬೀಳ್ಕೊಟ್ಟರು.

ಮಲ್ಲಿಗೆ ಮದುವೆಯಾಯಿತೆಂದು ಮಾದಣ್ಣನ ಹೆಂಡತಿ ಸಂತೋಷ

ಪಡುತ್ತಿದ್ದರೂ, ಮನೆಗೆ ಬಂದವರಿಗೆಲ್ಲಾ "ಮಗ ಹೊಂಟೋಯ್ತು, ಮನೆ ಬಿಮ್ಕೊಂತಿದೆ" ಎನ್ನುತ್ತಿದ್ದಳು. ಅವರೂ "ಹೌದು ಹೌದು" ಎಂದು ಹೇಳು ತಿದ್ದರು

ಮಲ್ಲಿ ಗಂಡನ ಮನೆಯಲ್ಲಿ ಸುಖವನ್ನನುಭವಿಸಲು ಬಂದಂತೆ ಕಾಣಲಿಲ್ಲ. ಅಲ್ಲಿ ಅವಳ ಮನಸ್ಸನ್ನು ಸಂತೋಷ ಪಡಿಸುವವರೂ ಇರಲಿಲ್ಲ. ಮಾವ ಮುಂಜಾನೆ ಹೊಲದ ಹತ್ತಿರಕ್ಕೆ ಹೋದರೆ, ಸಂಜೆಯೇ ಬರುವುದು. ಅವನಿ ಗಂತೂ ಮನೆಯಲ್ಲಿನ ವಿಚಾರ, ಆಗುಹೋಗುಗಳು ತಿಳಿಯದು. ಅಲ್ಲದೆ ಅವನು ಅವುಗಳನ್ನು ತಿಳಿದುಕೊಳ್ಳುವುದಕ್ಕೂ ಪ್ರಯತ್ನಿಸುತ್ತಿರಲಿಲ್ಲ. ಹೀಗಾಗಿ ಅವನಿಗೂ, ಮನೆಗೂ ಇದ್ದ ಸಂಬಂಧ ಸ್ವಲ್ಪ ದೂರವಾಗಿಯೇ ಇದ್ದಿತು. ಇನ್ನುಳಿದವನೆಂದರೆ ಅವಳ ಗಂಡ; ಅವನೂ ಮನೆಯಲ್ಲಿರುವುದಿಲ್ಲ. ಅವನಾ ಯಿತು, ದ್ಯಾವಮ್ಮನ ಮನೆಯಾಯಿತು. ಅವನೊಡನೆ ಸರಸಕ್ಕೆ, ವಿಲಾಸಕ್ಕೆ ಅವಳ ಮಗಳು ಕೆಂಪಿಯಾಯಿತು. ಮಗ ಏನು ತಪ್ಪು ಮಾಡಿದರೂ ಅವನ ತಾಯಿ ಗಮನಿಸುತ್ತಿರಲಿಲ್ಲ. ತಂದೆಯೇನಾದರೂ ಅವನನ್ನು ಬೈದರೆ, ತಾಯಿ ಮಗನನ್ನು ವಹಿಸಿಕೊಂಡೇ ಉತ್ತರ ಕೊಡುತ್ತಿದ್ದಳು. ಇದರಿಂದಾಗಿ ಗಂಡನ ಪ್ರೇಮ ಮಲ್ಲಿಯಲ್ಲಿ ಅಷ್ಟಕ್ಕಷ್ಟೆ ಆಗಿತ್ತು. ಇನ್ನು ಅತ್ತೆ ಮುನಿಯಮ್ಮನಂತೂ ಹೇಳತೀರದು. ಊರಿನವರೆಲ್ಲಾ ಅವಳನ್ನು ಕಂಡರೆ 'ಬಜಾರಿ' ಎಂದು ಕರೆ ಯುತ್ತಿದ್ದರು. ನಿಜಕ್ಕೂ ಅದು ಅವಳಿಗೆ ಒಪ್ಪು ಹೆಸರು. ಅಂತಹ ಅತ್ತೆ, ಸೊಸೆಯನ್ನು ಸುಮ್ಮನಿರಿಸುವುದಂತೂ ಕನಸೇ!

ಮಲ್ಲಿ ದಿನವಿಡೀ ದುಡಿದು, ಎಲ್ಲರೂ ಊಟ ಮಾಡಿ ಮಿಕ್ಕಿದುದನ್ನು ತಿಂದು, ಯಾವುದೋ ಒಂದು ಮೂಲೆಯಲ್ಲಿ ಮಲಗುತ್ತಿದ್ದಳು. 'ಅಯ್ಯೋ' ಎಂದು ಮರುಗುವ ಆತ್ಮೀಯರಾರೂ ಅವಳಿಗಲ್ಲಿರಲಿಲ್ಲ. ಹೀಗಾಗಿ ಅವಳಿಗೆ ಸಂಸಾರದಲ್ಲಿ ಬಹು ಬೇಸರವಾಯಿತು. ಬೇಸರದಿಂದಲೇ ಗಂಡನ ಮನೆಯಲ್ಲಿ ಆರು ತಿಂಗಳು ಕಳೆದವು. ಗೌರಿ ಹಬ್ಬ ಬಂದಿತು. ಮಾದಣ್ಣ ಮಗಳನ್ನು ಹಬ್ಬಕ್ಕೆ ಕರೆದೊಯ್ದ. ಮರಿಯಣ್ಣನಿಗೆ, ತನ್ನನಂಟಿಕೊಂಡಿದ್ದ ವ್ಯಕ್ತಿ ಯೊಂದು ದೂರವಾಯಿತಲ್ಲಾ ಎಂದು ಸಂತೋಷವಾಯಿತು. ಅವನ ತಾಯಿಗೂ ಅಷ್ಟೆ.

ಮರಿಯಣ್ಣ ಮಲ್ಲಿಯನ್ನು ಹೆಸರಿಗೆ ಮಾತ್ರ ಮದುವೆಯಾಗಿದ್ದ. ನಿಜಕ್ಕೂ ಆಗ ಅವನಿಗೆ ಮಲ್ಲಿ ಬೇಕಿರಲಿಲ್ಲ. ಬಾಲ ವಿಧವೆ ಕೆಂಪಿ ಅವನ

ಮನಸ್ಸನ್ನು ಆಕರ್ಷಿಸಿದ್ದಳು. ಮರಿಯಣ್ಣ ಒಮ್ಮೊಮ್ಮೆ "ನಮ್ಮ ಕೆಂಪಿಯು ಮುಂದೆ ಇದು ಯಾವ ಸಾಟಿ" ಎಂದು ತನ್ನಷ್ಟಕ್ಕೆ ತಾನೇ ಅಂದುಕೊಳ್ಳುತ್ತಿದ್ದ. ಊರಿನವರು "ಮರಿಯಣ್ಣನಿಗೆ ಇಷ್ಟು ದಿನ ಆದರೂ ಮದುವೆ ಆಗಲಿಲ್ಲ . . . ಏನು ಕಾರಣವೋ . . . ." ಎಂದುಕೊಂಡಾರು ಎಂಬ ಭಯದಿಂದ ಮಾತ್ರ ಮಲ್ಲಿಯನ್ನು ಮದುವೆಯಾದದ್ದು. ಮಗನ ಮನೋಭಾವನೆಯೇ ತಾಯಿ ಯಲ್ಲೂ ನೆಲೆಸಿದ್ದಿತು.

ಗೌರಿಯ ಹಬ್ಬ ಕಳೆದು ಒಂದು ತಿಂಗಳಾಗಿತ್ತು. ಮಲ್ಲಿ ಗಂಡನ ಮನೆಗೆ ಹೋಗಿರಲಿಲ್ಲ. ಗಂಡನ ಮನೆಯವರೂ ಬಂದು ಕರಕೊಂಡು ಹೋಗಲಿಲ್ಲ. ಹೀಗಾದ ಮಗಳ ಗತಿಯನ್ನು ಕಂಡು, ಅವಳ ತಂದೆ – ತಾಯಿಗೆ ಯೋಚನೆ ಯಾಯಿತು ಮಲ್ಲಿ ಗಂಡನ ಮನೆಗೆ ಹೋಗಬೇಕೆಂದರೂ, ಅವಳ ಮನಸ್ಸು 'ಯಾವ ಸುಖಕ್ಕಾಗಿ' ಎಂದು ಪ್ರಶ್ನೆ ಹಾಕಿ, ಅವಳನ್ನು ಸುಮ್ಮನಿರಿಸುತ್ತಿತು. ಮಾದಣ್ಣನಂತೂ ಗಟ್ಟಿ ಮನಸ್ಸು ಮಾಡಿಬಿಟ್ಟ. "ಮನೆಗೊಬ್ಬಳೇ ಮಗಳು; ಅವಳು ಇಲ್ಲಿದ್ದರೆ ನನಗೇನೂ ನಷ್ಟವಿಲ್ಲ. ಅವಳೇ ನನ್ನ ಗಂಡು ಮಗು – ನನ್ನ ಹೆಣ್ಣು ಮಗು. ಕರೆದುಕೊಂಡು ಹೋದರೆಷ್ಟು, ಬಿಟ್ಟರೆಷ್ಟು" ಎಂದು ಸಮಾಧಾನದ ಮಾತನ್ನು ಹೆಂಡತಿಗೆ ಹೇಳಿದ. ಆ ಮಾತು ಮಲ್ಲಿಯ ಕಿವಿಗೂ ಬಿದ್ದಿತ್ತು.

ಅಂತೂ ಮಲ್ಲಿ ತಂದೆಯ ಮನೆಯಲ್ಲಿಯೇ ನಿಂತುಬಿಟ್ಟಳು ಕೆಲವು ದಿನಗಳಲ್ಲಿ, ಮಲ್ಲಿಯ ವಿಚಾರ ಊರಿಗೆಲ್ಲಾ ತಿಳಿಯಿತು. ಕೆಲವರು ಅವಳಿ ಗಾಗಿ ಮರುಗಿದರು. ಹಲವರು ಅವಳೇ ತಪ್ಪಿತಸ್ಥಳೆಂದು ಬಯ್ದರು. ಉಳಿದ ವರು ಏನನ್ನೂ ಹೇಳದೆ ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದರು.

ಮಲ್ಲಿಗೆ ತೌರುಮನೆಯಲ್ಲಿ ಯಾರ ಭಯವೂ ಇರಲಿಲ್ಲ. ಯಾರ ಅಂಕೆಯೂ ಇದ್ದಿಲ್ಲ. "ಮನೆಗೊಬ್ಬಳೇ ಹೆಣ್ಣುಮಗಳು, ಏನಾದರೂ ಮಾಡಿ ಕೊಳ್ಳಲಿ" ಎಂದು ಅವಳ ತಾಯಿ-ತಂದೆಯರು ನಿಶ್ಚಿಂತರಾಗಿದ್ದರು. ಮಲ್ಲಿ ತನ್ನಷ್ಟಕ್ಕೆ ತಾನೇ ಹಾಡುವಳು, ನಗುವಳು. ದೇವರ ಮುಂದೆ ಅದೆಷ್ಟೋ ಹೊತ್ತು ಕುಳಿತು ದೇವರ ನಾಮವನ್ನು ನೆನೆಯುವಳು. ತಿಮ್ಮಣ್ಣದಾಸರು ಮೊದಲು ತನಗೆ ಹೇಳಿಕೊಟ್ಟಿದ್ದ ಕೀರ್ತನೆಗಳನ್ನೆಲ್ಲಾ ಹಾಡಿ ಮುಗಿಸುವ ತನಕ ಏಳುವಂತದ್ದಿಲ್ಲ. ಹೀಗಾಗಿ ಅವಳ ಆನಂದಕ್ಕೆ ಪಾರವೇ ಇರಲಿಲ್ಲ.

ಅದೊಂದು ದಿನ ಸಂಜೆಯಾಗುತ್ತ ಬಂದಿತ್ತು. ಮಲ್ಲಿ ಹಿತ್ತಿಲ ತೋಟ

ದಿಂದ ಹೂ ಕಿತ್ತುಕೊಂಡು ಮನೆಗೆ ಹೋಗುತ್ತಿದ್ದಳು. ಹಿತ್ತಲಿನಿಂದ ಮನೆಗೆ ಹೋಗಬೇಕಾದರೆ, ತಮ್ಮ ಮನೆಗೂ, ಊರ ದೊಡ್ಡ ಗೌಡರ ಮನೆಗೂ ಮಧ್ಯದಲ್ಲಿರುವ ಓಣಿಯನ್ನು ಹಾಯ್ದು ಹೋಗಬೇಕು. ಹಾಗೆ ಅವಳು ಓಣಿಯಲ್ಲಿ ಹಾಯ್ದು ಹೋಗುತ್ತಿದ್ದಾಗ, ದೊಡ್ಡ ಗೌಡರ ಮಗ ಅಪ್ಪಯ್ಯ, ತನ್ನ ಮಿಂಚಿನ ಕಣ್ಣುಗಳಿಂದ ಮಲ್ಲಿಯನ್ನು ಕರೆದ. ಮಲ್ಲಿ ಅವನನ್ನು ನೋಡಿಯೂ ನೋಡದಂತೆ ಸರಸರನೆ ಮನೆಗೆ ಬಂದಳು.

ದೊಡ್ಡ ಗೌಡರ ಮಗ ಅಪ್ಪಯ್ಯನಿಗೆ, ಮಲ್ಲಿಯನ್ನು ಇನ್ನೊಮ್ಮೆ ನೋಡಬೇಕೆಂದೆನಿಸಿತು. ಎಂದಾದರೊಂದು ದಿನ ಅವಳನ್ನು ಮಾತನಾಡಿಸಬೇಕೆಂಬ ಹಂಬಲವೂ ಅವನಲ್ಲಿ ಮೊದಲಾಯಿತು. ಆದರೆ ಮಲ್ಲಿ, ತನ್ನ ಕೈಗೆ ಸಿಕ್ಕುವುದೆಲ್ಲಿ? ಅವಳು ಹೊರಗಂತೂ ಬರುವುದೇ ಇಲ್ಲ. ಬಂದರೆ ಹಿತ್ತಲ ತೋಟಕ್ಕೆ ಮಾತ್ರ ಬರುವಳು. ಆಗ ಮಾತ್ರವೇ ಅವಳನ್ನು ನೋಡಬಹುದು. ಒಂದೆರಡು ಮಾತನಾಡಬಹುದು ಎಂದುಕೊಂಡ.

ಅದೇ ಸಂಜೆಯಲ್ಲಿ ಮಲ್ಲಿ ಹಿತ್ತಿಲಿನ ತೋಟಕ್ಕೆ ಬಂದಳು. ಅಪ್ಪಯ್ಯನೂ ತನ್ನ ಮನೆಯ ಎತ್ತುಗಳಿಗೆ ಹುಲ್ಲಿಗಾಗಿ ತನ್ನ ಹಿತ್ತಿಲಿಗೆ ಬಂದ. ಹಳ್ಳಿಯಲ್ಲಿ ಕೆಲವೆಡೆ, ಅಕ್ಕಪಕ್ಕದಲ್ಲಿ ಮನೆಗಳಿರುವಂತೆಯೇ ಹಿತ್ತಿಲುಗಳು ಇರುತ್ತವೆ. ಆದ್ದರಿಂದ ಮಾದಣ್ಣನ ತೋಟ-ಹಿತ್ತಿಲು ಮತ್ತು ದೊಡ್ಡ ಗೌಡರ ಹಿತ್ತಿಲು ಅಕ್ಕಪಕ್ಕದಲ್ಲಿದ್ದವು.

ಮಲ್ಲಿ ಹೂ ಕೀಳುತ್ತಿದ್ದಳು. ಅಪ್ಪಯ್ಯನೂ ತನ್ನ ಕೆಲಸದಲ್ಲಿ ತೊಡಗಿದ್ದ. ಆದರೂ ಅವನ ದೃಷ್ಟಿ, ಅವನ ನೋಟ ಮಲ್ಲಿಯ ಮೇಲೆಯೇ ಬಿದ್ದಿತ್ತು. ಇದ್ದಕ್ಕಿದ್ದಂತೆ ಅವನ ಬಾಯಿಂದ ಹೊರ ಬಂದಿತ್ತು. "ಏನು ಮಲ್ಲೀ, ಹೂ ಕೀಳೋಕೆ ಬಂದಿದ್ದೀಯಾ" ಎಂದ. "ವ್ಹು ಕಾಣಣ್ಣಾ" ಎಂದು ಸುಮ್ಮನಾದಳು ಮಲ್ಲಿ. ಪುನಃ ಏನು ಮಾತನಾಡುವುದೆಂದು ಅಪ್ಪಯ್ಯನಿಗೆ ತಿಳಿಯಲಿಲ್ಲ. ಅವನೂ ಸುಮ್ಮನಾದನು. ಪುನಃ ಎರಡು ನಿಮಿಷಗಳ ನಂತರ ಅಪ್ಪಯ್ಯ "ಬೇಕಾದರೆ ನೋಡು, ಈ ಇತ್ತಲಾಗೂ ನಾಲ್ಕು ಗಿಡ ಇದೆ. ಹೂನೂ ಬಿಟ್ಟಿದೆ, ಕಿತ್ತುಕೊ" ಎಂದು ತನ್ನ ಹಿತ್ತಿಲಿಗೆ ಕರೆದ. ಮಲ್ಲಿ ತನ್ನ ತೋಟದಲ್ಲಿನ ಹೂಗಳನ್ನೆಲ್ಲಾ ಕಿತ್ತುಕೊಂಡು ಹೋಗಲೋ-ಬೇಡವೋ ಎಂದು ಯೋಚಿಸುತ್ತಾ, ಕಡೆಗೆ ಅರೆಮನಸ್ಸಿನಿಂದಲೇ ಅಪ್ಪಯ್ಯನ ಹಿತ್ತಿಲಿಗೆ ಹೋದಳು. ಅಪ್ಪಯ್ಯ ಆ ವೇಳೆಗೆ ಹುಲ್ಲು ಕಿತ್ತಾಗಿತ್ತು. 'ಬರಕ'ದಲ್ಲಿ ಕಟ್ಟುತ್ತಿದ್ದ. ಮಲ್ಲಿ

ಒಂದೊಂದಾಗಿ ಹೂ ಬಿಡಿಸಿಕೊಳ್ಳುತ್ತಿದ್ದಳು. ಅಪ್ಪಯ್ಯ ಮಾತನಾಡಲು ತೊಡಗಿದ – "ಏನು ಮಲ್ಲಿ, ನಿನ್ನ ಗಂಡನ ಮನೇಗೆ ಓಗೋಕಿಲ್ವಾ" ಎಂದ. ಮಲ್ಲಿ ಮೌನದಿಂದಲೇ ಹೂ ಬಿಡಿಸಿಕೊಳ್ಳುತ್ತಿದ್ದಳು. "ಯಾಕೆ ಮಾತಾಡೋಕಿಲ್ಲ ಮಲ್ಲಿ" ಎಂದ ಅಪ್ಪಯ್ಯ ಮೆಲ್ಲಗೆ ಮಲ್ಲಿಯ ಬಳಿಗೆ ಬಂದ. "ಏನದಣ್ಣ ಮಾತಾಡೋಕೆ" ಎಂದಳು ಮಲ್ಲಿ. "ಅಲ್ಲ ನಿನ್ನ ಗಂಡನ ಮನೀಗೆ, ಈಸು ದಿನ ಆಯ್ತು, ಯಾಕೋಗ್ಲಿಲ್ಲ ಅಂತ ಕೇಳ್ದೆ" ಎಂದ ಅಪ್ಪಯ್ಯ. ಅವನ ಮಾತಿನಲ್ಲಿ ಕೃತ್ರಿಮವಿತ್ತು. ಕಾಮದ ಬಯಕೆಯ ಕೊಂಕು ನೋಟ ಅವನ ಕಣ್ಣಿಂದ ಹೊಮ್ಮುತ್ತಿತ್ತು. ಮಲ್ಲಿ ಅವನ ಮಾತಿಗೆ ಏನನ್ನೂ ಹೇಳದೆ ಸರಸರನೆ ಮನೆಯತ್ತ ಹೊರಟಳು. ಅವಳ ಮನದಲ್ಲಿ ಯೋಚನೆ ತುಂಬಿತ್ತು. ಗಂಡನನ್ನು ಬಿಟ್ಟು ಬಂದ ತನ್ನನ್ನು ಇತರರು ನೋಡುವ ರೀತಿ ಅವಳಿಗೆ ಅಂದು ಸ್ಪಷ್ಟವಾಯಿತು. ಮನೆಯಲ್ಲಿ ತಂದೆ ತಾಯಿಗಳೇನೋ ಪ್ರೀತಿಸುತ್ತಿದ್ದರು. ಆದರೆ ಅವರೆಷ್ಟು ದಿನ ಪ್ರೀತಿಸಿ, ತನ್ನನ್ನು ಪ್ರೀತಿಸಿಯಾರು? ಮುದುಕರಿಬ್ಬರೂ ಸತ್ತ ನಂತರ ನನ್ನ ಬಾಳು ನಡೆಸುವುದಾದರೂ ಹೇಗೆ? ಗಂಡನೆಂಬುವನೊಬ್ಬನಿದ್ದರೆ ಅವನ ತಲೆಯ ಮೇಲೆ ಈ ಭಾರವನ್ನೆಲ್ಲಾ ಹಾಕಿ ಸುಖವಾಗಿರಬಹುದು. . . . . ಎಂದು ಯೋಚಿಸುತ್ತಿದ್ದಳು. ರಾತ್ರಿ ಊಟದ ಹೊತ್ತಾಯಿತು. ಮಲ್ಲಿ ಸ್ವಲ್ಪ ಊಟ ಮಾಡಿ ಮಲಗಿದಳು. ಮನಸ್ಸಿನಲ್ಲಿ ನಾನಾ ಯೋಚನೆಗಳು, ಒಂದಾದ ಮೇಲೊಂದು ಬರುತ್ತಿದ್ದವು. ಎಷ್ಟು ಯೋಚಿಸಿದರೂ ಅವಳಿಗೆ ಉತ್ತರ ದೊರೆಯಲಿಲ್ಲ. ಕಡೆಗೆ "ದೇವರೇ ನೀನೇ ಗತಿ" ಎಂದುಕೊಂಡು ನಿದ್ದೆ ಹೋದಳು.

ಮರುದಿನ ಊರಿನಲ್ಲಿ ತಿಮ್ಮಣ್ಣದಾಸರ ಹರಿಕತೆ. ಅವರ ಹರಿಕತೆಯೆಂದರೆ ಊರಿನವರಿಗೆಲ್ಲಾ ಬಲು ಆನಂದ. ಊರಿನ ಜನರಿಗೆಲ್ಲಾ ದಾಸರಿಗೆ ಬೇಕಾದುದನ್ನು ಒದಗಿಸುತ್ತಾ ನೆರವಾಗಿದ್ದರು. ದಾಸರು ಅಂದು ಸಂಜೆ ಮಾಡಬೇಕಾಗಿದ್ದ 'ಸತಿ-ಸಾವಿತ್ರಿ' ಹರಿಕತೆಯ ಕೆಲವು ಭಾಗಗಳನ್ನು ನೆನಪಿಗೆ ತಂದುಕೊಳ್ಳುತ್ತಲಿದ್ದರು. ಅಷ್ಟರಲ್ಲಿ ಮಾದಣ್ಣ ಅವರ ಬಳಿಗೆ ಬಂದ. ದಾಸರಿಗೆ ಮಾದಣ್ಣನನ್ನು ಕಂಡು ಸಂತೋಷವಾಯಿತು. ಇಬ್ಬರೂ ಮಾತುಕತೆಯಾಡಿದರು. ಕಡೆಗೆ ಮಾದಣ್ಣ ದಾಸರನ್ನು ತನ್ನ ಮನೆಗೆ ಬರಬೇಕೆಂದು ಒತ್ತಾಯಪಡಿಸಿ ಕರೆದುಕೊಂಡು ಹೋದ.

ದಾಸರಿಗೂ ಮಾದಣ್ಣನಿಗೂ ಮೊದಲಿನಿಂದಲೂ ಅತೀವ ವಿಶ್ವಾಸ.

ಮಾದಣ್ಣ ತನ್ನ ಸುಖ-ದುಃಖಗಳನ್ನು ದಾಸರಿಗೆ ಹೇಳಿ ಅವರಿಂದ ಏನಾದರೂ ಬುದ್ಧಿವಾದಗಳನ್ನು ಪಡೆಯುತ್ತಿದ. ದಾಸರೂ ಮಾದಣ್ಣನನ್ನು ಕಂಡರೆ "ಅಯ್ಯೋ ಪಾಪ, ಹಸುಳೆಯಂತಹ ಹೃದಯ, ಏನೂ ತಿಳಿಯದು'' ಎಂದು ತಮ್ಮಷ್ಟಕ್ಕೆ ತಾವೇ ಅಂದುಕೊಳ್ಳುತ್ತಿದ್ದರು. ಇದರಿಂದಾಗಿ ಮಾದಣ್ಣ ತಾನು ಮಾಡಬೇಕಾದ ಎಲ್ಲ ಕೆಲಸಗಳನ್ನೂ ದಾಸರ ಸಲಹೆ-ಅವರ ಜವಾಬ್ದಾರಿ-ಯಂತೆಯೇ ಮಾಡುತ್ತಿದ್ದನು.

ಮಾದಣ್ಣ ಮನೆ ಸೇರಿ, ದಾಸರನ್ನು ಚಾಪೆಯ ಮೇಲೆ ಕುಳ್ಳಿರಿಸಿ, ತಾನು ನೆಲದ ಮೇಲೆ ಕುಳಿತುಕೊಂಡ. ಮಾದಣ್ಣನ ಹೆಂಡತಿ ಸೊಕ್ಕಮ್ಮ ಹಾಲು ಕಾಯಿಸಿ ತಂದು ದಾಸರ ಮುಂದಿಟ್ಟು, ಅಡಿಗೆ ಮನೆಯ ಬಾಗಿಲಲ್ಲಿ ನಿಂತುಕೊಂಡಿದ್ದಳು. ಮಲ್ಲಿ ಮನೆಯಲ್ಲಿರಲಿಲ್ಲ.

ಹಾಲು ಕುಡಿಯುತ್ತ ದಾಸರು ಮಾತಿಗಾರಂಭಿದರು!

"ಮಾದಣ್ಣಾ, ಏನೇನೋ ಮಾತನಾಡಿದೆ ನೀನು. ಆದರೆ ಒಂದು ವಿಷಯ ತಿಳಿಸಲೇ ಇಲ್ಲವಲ್ಲಾ!''

"ಏನು ದೇವ್ರ ಅದು."

"ಮತ್ತೇ ನನ್ನೇ ಕೇಳ್ತೀಯಲ್ಲ; ಊರಿನವರಿಗೆಲ್ಲಾ ನಿನ್ನ ಮನೆ ವಿಷಯ ತಿಳಿದಿದೆ. ಅಂದ್ಮೇಲೆ ನನ್ಗೇ ತಿಳೀದೇನು?"

"ನಪ್ಪಿಲ್ಲ ಬುದ್ಧಿ . . . . . "

"ಅದೇ ನಿನ್ನ ಮಗಳ ವಿಷಯಾನಯ್ಯ . . . . . "

"ಓ. ಅದಾ . . . . . ನಿಮುಗ್ಳಿಂಗ್ ತಿಳೀತ್ಬುದ್ಧಿ."

"ನೀನ್ಹೇಳ್ದೆ ಇದ್ದರೆ ಬೇರೆ ಯಾರೂ ಹೇಳೋದಿಲ್ಲ ಅಂತ ತಿಳ್ಕೊಂಡಿದ್ದೀಯೇನು? . . . . ನಿನ್ನೇನೇ ಯಾರೋ ಹೇಳಿದ್ರು . . . . ಹೀಗೆ ಮಾತ್ನಾಡ್ತಿದ್ದಾಗ."

". . . . . ಏನೋ ಹಿಂಗಾಗೋಯ್ತು ಬುದ್ದಿ."

". . . . . ಹಾಗಾದರೆ ಏನು ಮಾಡಬೇಕೂಂತ ಇದ್ದೀಯ."

"ಏನು ಮಾಡಬೇಕೂಂತ ನನಗನಕ ತಿಳೀದು ಬುದ್ಧಿ."

"ಇಲ್ಲ ಮಾದಣ್ಣ. ಏನಾದರೂ ಮಾಡಿ ನಿನ್ನ ಮಗಳನ್ನು ಗಂಡನ ಮನೇಗೆ ಕಳುಹಿಸಲೇಬೇಕು."

"ಹೌದು ಬುದ್ಧಿ; ನನಗೂ ಅಂಗೇ ಅನ್ನಿಸ್ತದೆ, ಏನು ಮಾಡೋದು?"

"..... ನೀನು ಯೋಚಿಸಬೇಡ ಮಾದಣ್ಣ. ನಾ ಏನಾದರೂ ಮಾಡಿ ಅವರನ್ನು ಅವಳ ಗಂಡನ ಮನೇಗೆ ಬಿಟ್ಟು ಬರ್ತೀನಿ .... ಯೋಚನೆ ಮಾಡಬೇಡ .... ಏನಂತೀಯಮ್ಮಾ....."

"ನಿಮ್ಮ ಚಿತ್ತ ಬುದ್ಧಿ ....." ಎಂದಳು ಮಾದಣ್ಣನ ಹೆಂಡತಿ ಸೊಕ್ಕಮ್ಮ.

ದಾಸರು ಮಾದಣ್ಣನ ಕಿವಿಯಲ್ಲಿ ಅದೇನೋ ಹೇಳಿ, ಅದನ್ನು ನಂತರ ಸೊಕ್ಕಮ್ಮನಿಗೂ ತಿಳಿಸುವಂತೆ ಹೇಳಿ ತಮ್ಮ ಬಿಡಾರದತ್ತ ನಡೆದರು.

ರಾತ್ರಿ ಹರಿಕತೆ ಸೊಗಸಾಗಿತ್ತು. ಕತೆಗಿಂತ ಅವರ ಹಾಡು, ಇನ್ನೂ ಸೊಗಸಾಗಿತ್ತು. ಮಧ್ಯ ಮಧ್ಯದಲ್ಲಿ ಹೇಳುವ ಉಪಕತೆಗಳಂತೂ ಎಲ್ಲರನ್ನೂ ನಗಿಸಿ ನಲಿಸುತ್ತಿತ್ತು. ಆ ಉಪಕತೆಗಳಲ್ಲಿ ಮಲ್ಲಿಯ ಕತೆಯೂ ಬೇರೆಯ ರೂಪದಲ್ಲಿ ಬಂದು ಹೋಗಿತ್ತು. ಹರಿಕತೆ ಮುಗಿದಾಗ, ಮಂಗಳಾರತಿಯ ತಟ್ಟೆಯಲ್ಲಿ ಲಕ್ಷ್ಮಿ ತುಂಬಿಹೋಗಿದ್ದಳು. ಅದೇ ಅವರ ಹರಿಕತೆ ಯಶಸ್ವಿ ಯಾಗಿತ್ತೆಂಬುದಕ್ಕೆ ಸಾಕ್ಷಿಯಾಗಿತ್ತು.

ಮರುದಿನ ದಾಸರು ಬೇರೆ ಊರಿಗೆ ಹೊರಡುವವರಿದ್ದರು. ಊರಿನ ಹಿರಿಯರನೇಕರು ಸೇರಿ, ದಾಸರಿಗೆ ತಲಾ ಅಷ್ಟಷ್ಟು ಹಣ ಕೊಟ್ಟರು. ದಾಸರು ಅದನ್ನು ತೆಗೆದುಕೊಂಡು ನೆರೆ ಹಳ್ಳಿಗೆ ಹೊರಟರು.

ಹಿಂದಿನ ದಿನವೇ ಮಾದಣ್ಣನಿಗೆ ಗುಟ್ಟಿನಲ್ಲಿ ತಿಳಿಸಿದ್ದಂತೆ, ಮಾದಣ್ಣ ತನ್ನ ಮಗಳು ಮಲ್ಲಿಯೊಡನೆ ಊರು ಹೊರಗಿನ—ಕನ್ನಹಳ್ಳಿಯ ದಾರಿಯಲ್ಲಿ— ದಾಸರ ಬರುವಿಕೆಗಾಗಿ ಕಾದಿದ್ದ. ದಾಸರು ತಾವು ಮುಂದೆ ಮಲ್ಲಿಯ ವಿಷಯ ದಲ್ಲಿ ಮಾಡಬೇಕಾದ ಕೆಲಸಗಳನ್ನೆಲ್ಲಾ ಯೋಚಿಸುತ್ತಾ ಮಾದಣ್ಣ ಕಾದಿದ್ದಲ್ಲಿಗೆ ಬಂದರು. ನಂತರ ಮಾದಣ್ಣನಿಗೆ "ಇನ್ನು ನೀನು ಹೋಗು ಮಾದಣ್ಣಾ, ಮಲ್ಲಿ ವಿಚಾರ ನೀನು ಯೋಚಿಸಬೇಡ. ನಾನು ಎಲ್ಲವನ್ನೂ ಸರಿಯಾಗಿ ಮಾಡ್ತೀನಿ" ಎಂದು ಹೇಳಿ ಮಾದಣ್ಣನನ್ನು ಕಳುಹಿಸಿ, ಮಲ್ಲಿಯೊಡನೆ ಕನ್ನಹಳ್ಳಿಯ ದಾರಿ ಯಲ್ಲಿ ಮುನ್ನಡೆದರು. ದಾರಿಯಲ್ಲಿ ಮಲ್ಲಿಗೆ, ತನ್ನೊಡನೆ ಹೇಗಿರಬೇಕೆಂದು ಸರಿಯಾಗಿ ತಿಳಿಸಿ, ಸಾಕಷ್ಟು ಬುದ್ಧಿವಾದವನ್ನು ಹೇಳುತ್ತಿದ್ದರು.

ಮಧ್ಯಾನ್ಹದ ಹೊತ್ತಿಗೆ ಇಬ್ಬರೂ ಕನ್ನಹಳ್ಳಿಯನ್ನು ತಲಪಿದರು. ಊರ ಗೌಡನಿಗೆ ದಾಸರು ಬಂದಿರುವರೆಂಬ ಸುದ್ದಿಯು ತಿಳಿಯಿತು. ಅವನು ಅವರಿಗೆ, ಊರಿನ ದೇವಸ್ಥಾನದಲ್ಲಿ ಬಿಡಾರ ಮಾಡಿಸಿ, ಎಲ್ಲ ಸೌಕರ್ಯವನ್ನೂ ಮಾಡಿ

ಕೊಡತೊಡಗಿದನು. ಎಲ್ಲ ಹಳ್ಳಿಗಳ ಪದ್ಧತಿಯಂತೆ, ಊರಿನ ಭಜನೆ ಮಂದಿರದ ಯುವಕರು ದಾಸರಿಗೆ ಸಹಾಯ ಮಾಡಲಾರಂಭಿಸಿದರು. ಯಾರು ದಾಸರನ್ನು ನೋಡಲು ಬಂದರೂ ಅವರ ಜೊತೆಯಲ್ಲಿ ಮುಖ ಕಾಣದಂತೆ ಸೆರಗು ಹೊದ್ದುಕೊಂಡಿದ್ದ ಮಲ್ಲಿಯನ್ನು ನೋಡಿ 'ಈ ಮೊಗ ಯಾರು ಬುದ್ಧಿ' ಎಂದು ಕೇಳುತ್ತಿದ್ದರು. 'ನನ್ನ ಮಗಳು' ಎಂದು ದಾಸರು ಉತ್ತರ ಕೊಡುತ್ತಿದ್ದರು. ಹೀಗಾಗಿ ಊರಿನವರಿಗೆಲ್ಲಾ 'ದಾಸರಿಗೊಬ್ಬಳು ಮಗಳಿದ್ದಾಳೆ' ಎಂದು ತಿಳಿಯಿತು. ಕೆಲವರು 'ನೋಡುವುದಕ್ಕೆ ಚೆನ್ನಾಗಿದ್ದಾಳೆ – ಎಷ್ಟಾದರೂ ಬ್ರಾಹ್ಮಣರ ಹುಡುಗಿ' ಎಂದು ಹೇಳಿಕೊಂಡರು. ಅಂತಹವರಲ್ಲಿ ಮರಿಯಣ್ಣನೂ ಒಬ್ಬ.

ಮರಿಯಣ್ಣ ಈಗ ಬಹಳ ಕೃಶವಾಗಿದ್ದಾನೆ. ಅವನ ಕೆಂಪಿ, ಈಗೆರಡು ತಿಂಗಳ ಹಿಂದೆ ಬಂದ ಪ್ಲೇಗಿನಲ್ಲಿ ತೀರಿಹೋದಳು. ಅದೊಂದೇ ಅವನ ಕೊರಗು. ಹೆಂಡತಿಯನ್ನು ಕರೆತರುವ ಎಂದರೆ, ಇಷ್ಟು ದಿನಗಳಾದ ಮೇಲೆ ತಾನೇ ತಾನಾಗಿ ಹೋಗಿ ಕರೆತರುವುದು ಅವನಿಗೆ ಅವಮಾನ – ನಾಚಿಕೆ ಎಂದು ತೋರಿತು. ಹೀಗಾಗಿ ಅವನ ಮುಖದಲ್ಲಿ ಕಳೆಯೇ ಇರಲಿಲ್ಲ. ತಾಯಿಯಂತೂ ಮುದುಕಿ. ಅವಳಿಗೇನು ಗೊತ್ತು ಮಗನ ಚಿಂತೆ. ಇನ್ನು ತಂದೆ; ಅವನಂತೂ ಮಗನನ್ನೇ ವಿಚಾರಿಸಿಕೊಳ್ಳುವುದನ್ನೇ ಬಿಟ್ಟಿದ್ದ. ಇದರಿಂದ ಮರಿಯಣ್ಣನಿಗೆ ಬಹಳ ಬೇಸರ ಬಂದಿತ್ತು. ಹಾದಿಯಲ್ಲಿ ಹೋಗುವ ಹೆಣ್ಣುಮಕ್ಕಳ ಮೇಲೆಲ್ಲಾ ಅವನ ದೃಷ್ಟಿ ಹರಿದಿತ್ತು.

ದೊಡ್ಡಗೌಡರು ಹೇಳಿದಂತೆ ದಾಸರು ಅಂದು 'ಶನಿ–ಮಹಾತ್ಮ್ಯೆ' ಹರಿಕಥೆಯನ್ನು ಮಾಡಿದರು. ಅಚ್ಚುಮೆಚ್ಚಿನ ದಾಸರ ಬಾಯಲ್ಲಿ, ಇಂಪುಸೊಂಪಿನ ದನಿಯ ಹಾಡು, ಹರಿಕಥೆಯೊಡನೆ ಹರಿದುಬಂದರೆ, ನಿಜಕ್ಕೂ ಹರಿಕಥೆ ಯಾರ ಮನ ಮೆಚ್ಚದಿದ್ದೀತು! ಉಪಕಥೆಯ ಸರಣಿ ಬಂದಾಗಲಂತೂ, ಆ ಹಳ್ಳಿಗರಿಗೆ ತಮಗೊಬ್ಬ ತೆನ್ನಾಲಿ ರಾಮಕೃಷ್ಣ ಸಿಕ್ಕಿದಂತೆಯೇ ಆಗುತ್ತಿತ್ತು. ಅಂತೂ ಅಂದಿನ ಹರಿಕಥೆ ಎಲ್ಲರ ಮನ ಮೆಚ್ಚುವಂತಿತ್ತು. ಊರಿನವರು ಇನ್ನೊಂದು ಹರಿಕಥೆಯನ್ನು, ಮೂರನೆಯ ದಿವಸ ಮಾಡಬೇಕೆಂದು ದಾಸರನ್ನು ಕೇಳಿಕೊಂಡರು. ಊರಿನ ಹಿರಿಯಗೌಡರ ಬಲವಂತದಿಂದಲೂ ಮತ್ತು ಎಲ್ಲರ ಇಷ್ಟದಂತೆಯೂ ಮರುದಿನ ಮತ್ತೊಂದು ಹರಿಕಥೆ ನಡೆಯಲೇರ್ಪಾಡಾಯಿತು.

ಮಾರನೆಯ ದಿವಸ ದಾಸರು ಎದ್ದು, ಸ್ನಾನಮಾಡಿ, ದೇವರನ್ನು ಧ್ಯಾನಿಸತೊಡಗಿದರು. ಮರಿಯಣ್ಣ ಅವರಿಗೆ ಒಂದು ಗೊಂಚಲು ಬಾಳೆಹಣ್ಣು ಮತ್ತು ಹಾಲು ಕೊಡಲು ತಂದಿದ್ದ. ದಾಸರು ಮಡಿಯಲ್ಲಿದ್ದುದರಿಂದ ಎದ್ದು ಬಂದು ಅವನ್ನು ತೆಗೆದುಕೊಳ್ಳುವಂತಿರಲಿಲ್ಲ. ಆದ್ದರಿಂದ ಅವರು ಮಲ್ಲಿಗೆ ಅವನ್ನು ತೆಗೆದುಕೊಳ್ಳಲು ಹೇಳಿದರು. ಅಲ್ಲಿಯೇ ಕುಳಿತಿದ್ದ ಮಲ್ಲಿ, ಸೆರಗನ್ನು ಸರಿಯಾಗಿ ತಲೆಯತುಂಬ, ಮುಖ ಕಾಣಿಸದಂತೆ ಹೊದ್ದುಕೊಂಡು, ಅವನ್ನು ತೆಗೆದುಕೊಳ್ಳಲು ಹೋದಳು. ದಾಸರು ಧ್ಯಾನದಲ್ಲಿ ತಲೆತಗ್ಗಿಸಿದ್ದರು. ಮಲ್ಲಿಗೆ ಅವನು ತನ್ನ ಗಂಡನೆಂದು ತಿಳಿದಿತ್ತು. ಆದರೂ ಅದನ್ನು ಅವಳು ತೋರ್ಪಡಿಸಲಿಲ್ಲ.

ದಾಸರು ಧ್ಯಾನಾಸಕ್ತರಾಗಿದ್ದರೂ, ಅವರ ಓರೆನೋಟ ಮಲ್ಲಿ–ಮರಿಯಣ್ಣರನ್ನು ನೋಡುತ್ತಲೇ ಇತ್ತು. ಮಲ್ಲಿ ಹಾಲು-ಹಣ್ಣನ್ನು ತಂದು ದಾಸರ ಮುಂದಿರಿಸಿ, ಅವರ ಪಕ್ಕದಲ್ಲಿಯೇ ಕುಳಿತಳು.

ಸ್ವಲ್ಪ ಹೊತ್ತಿನ ನಂತರ ದಾಸರು ಧ್ಯಾನ ಮುಗಿಸಿ, ಕುಳಿತಿದ್ದ ಮರಿಯಣ್ಣನೊಡನೆ ಮಾತನಾಡಲಾರಂಭಿಸಿದರು.

"ನೀನು ಯಾರ ಮಗನಪ್ಪ?"

"ದ್ಯಾವೇಗೌಡ್ರ ಮಗ ಬುದ್ಧಿ."

"ಓ! ಯಾರು ನಮ್ಮ ಸೀನೀರು ಭಾವಿ ದ್ಯಾವೇಗೌಡನಯ್ಯಾ?"

"ಹೌದು ಬುದ್ಧಿ."

"ಹಾಗಾದರೆ, ಎಲ್ಲರೂ ಆರೋಗ್ಯ ತಾನೆ?"

"ಎಲ್ಲಾ ಆರೋಗ್ಯಾನೇ ಬುದ್ಧಿ . . . ನಿಮ್ಮ ದಯೆಯಿಂದ . . ."

"ಏನು ಈಸಲ ಬೆಳೆಗಿಳೆ ಪರವಾಗಿಲ್ಲವೋ?"

"ವಾದ್ವರ್ಸಕ್ಕಿಂತ ಚೆನ್ನಾಗೈತೆ ಬುದ್ಧಿ"

"ಸಂತೋಷನಪ್ಪ . . . ಒಳ್ಳೇದು . . . ಎಷ್ಟು ಮಕ್ಕಳು ನಿನಗೆ?"

"ಇಲ್ಲಾ ಬುದ್ಧಿ . . ."

"ಅದೇನು ಹಾಗಂತೀಯೆ? ಮದುವೆಯಾಗಿ ಎರಡು ವರ್ಷದ ಮೇಲಾಯಿತಲ್ಲವೇ?"

"ಔದ್ಬುದ್ಧಿ . . . ಅವಳು ಮದುವೆಯಾದ ಆರು ತಿಂಗಳಿಗೆ ಗೌರಿಹಬ್ಬ ಬಂತು ಅಂತ ತೌರಿಗೆ ಹೋದವಳು ಇನ್ನೂ ತನಕ ಬರಲಿಲ್ಲ."

"ಕಾರಣ . . .? ಹೀಗ್ಹೇಳ್ತೀಯಲ್ಲಾ! ನೀನಾದರೂ ಹೋಗಿ ಕರೆತರ ಬಾರದಿತ್ತೇ?"

"ಅಲ್ಲಾ ಬುದ್ಧಿ, ಅವಳಿಗೇ ಅಷ್ಟು ಬರಬೇಕೂಂತ ಜ್ಞಾನ ಇಲ್ಲದ ಮೇಗೆ, ನಾನೇನು ಮಾಡೋಕಾಯ್ತದೆ?"

"ಪದ್ಧತಿ ಪ್ರಕಾರ ನೀನು ಹೋಗಿ ಕರೆದೆಯೇನಯ್ಯ . . . ಬಾ ಅಂತ . . . ಮುಖ್ಯ ನಿನಗೆ ಅವಳ ಮೇಲೆ ಇಷ್ಟ ಇಲ್ಲ ಅಂತ ಅನ್ನು."

" . . . ಅಂಗಲ್ಲ ಬುದ್ಧಿ . . ."

"ಹಾಗಲ್ಲದಿದ್ದರೆ ಇನ್ನು ಹೇಗೆ? ಸರಿಯಾಗಿ ಮಾತನಾಡು . . ."

" . . . ನಮ್ಮಪ್ಪನೂ ಏನೋ ಬೇಡ ಅಂದ್ಲು – ನನಗೂ ಅಂಗೇ . . . ನಮ್ಮಪ್ಪನ ಮಾತೇ ಸರಿ ಅಂತ ಕಾಣ್ತು . . . ಅಂಗೇ ಸುಮ್ಮಿದ್ಬಿಟ್ಟೆ . . ."

"ಹಾಗಾದ್ರೆ ನಿಮ್ಮಪ್ಪ ನಿನಗೆ ಬೇರೆ ಮದುವೆ ಮಾಡಬೇಕೂಂತ ಇದ್ದಾ ಳೇನು?"

" . . . . . . . "

"ಹಾಗಾದ್ರೆ ಯಾಕೆ ಮಾಡಿಕೋಬಾದ್ರು?"

"ಯಾವುದೂನು ಒಳ್ಳೆ ಎಣ್ಣು ಸಿಕ್ಕಿಲ್ಲಾ ಬುದ್ಧಿ"

"ಅದೂ ನಿಜಾನೆ ಅನ್ನು . . . ನಿನ್ನ ವಯಸ್ಸಿಗೆ ಜೊತೆಹೆಣ್ಣು ಎಲ್ಲಿ ಸಿಕ್ಕ ಬೇಕು?"

" . . . . . . "

" . . . ಏನು ಮೂವತ್ತುವರ್ಷ ಆಯ್ತೋ ನಿನಗೆ?"

"ಇರಬೋದು ಬುದ್ಧಿ; ನಮ್ಮಪ್ಪ ಸೀಸೇರು ಬಾವಿ ತೋಡಿಸ್ತಿದ್ದಾಗಂತೆ ನಾವುಟ್ಟಿದ್ದು."

"ಓ ಹಾಗಾದ್ರೆ ಆಗ ನನಗೆ ಇಪ್ಪತ್ತೆರಡು . . . ಅಂದ್ರೆ ನನಗೀಗ ಐವತ್ನಾಲ್ಕು ವರ್ಷ . . . ಸರಿ ನಿನಗೀಗ ಮೂವತ್ತೆರಡು ವರ್ಷ . . . ಹೆಚ್ಚು ಕಡಿಮೆ ಸರಿಹೋಯ್ತಲ್ಲಾ ನಾ ಹೇಳಿದ್ದು . . ."

"ಸರಿ ಓಗ್ಲಿ ಏನು ಬುದ್ಧಿ."

"ವ್ಹ ಎಲ್ಲಾದ್ರೂ ಹೋಗ್ಲಿ ಆ ಮಾತು ಬಿಡು . . . ನಿನ್ನ ಮದುವೆ ಮಾತು ಏನು?"

"ಏನ್ಸ್ವಾಮಿ, ಮದ್ವೆ ಮಾತು."

"ನಿನ್ನ ಹೆಂಡ್ತೀನೇ ಯಾಕೆ ಕರಕೊಂಡು ಬರಬಾರದೂಂತ?"

"ಇಷ್ಟು ದಿನ ಆಯ್ತು ಬುದ್ಧಿ . . . ನಾನಾಗಿ ಓದ್ರೆ ಜನ ಏನನ್ನಾಕಿಲ್ಲ? ನಾನಾಗೋಕಿಲ್ಲ ಬುದ್ಧಿ."

"ಅವಳಾಗಿ ಅವಳೇ ಬಂದ್ರೆ . . . "

"ಬರಲೇಳ್ರಿ ಬುದ್ಧಿ, ಸುಖವಾಗಿರ್ಲಿ ಮನೇ ಒಳ್ಗೆ . . . ದೇವ್ರು ಕೊಟ್ಟಂಗಯ್ತು ಮನೇಗೆ . . . ಅವಳು ಬಂದ್ರೆ ನಮ್ಗೂನೂ ಸಂತೋಸಾನೆ."

ಊಟದ ಹೊತ್ತಾಗಿತ್ತು. ಮುನಿಯಮ್ಮ, ಮಗನು ಇಷ್ಟು ಹೊತ್ತಾದರೂ ಬರಲೇ ಇಲ್ಲ ಎಂದು ಹುಡುಕಿಕೊಂಡು, ಕಡೆಗೆ ದಾಸರ ಬಳಿಗೆ ಬಂದಳು. ದಾಸರ ಬಳಿ ಮಾತನಾಡುತ್ತಿದ್ದ ಮರಿಯಣ್ಣನನ್ನು ನೋಡಿ:

"ಏನೋ ಮರಿಸಾ . . . ಉಣ್ಣಾಕೆ ಬರೋಕಿಲ್ವಾ?" ಎಂದು ಕೇಳಿದಳು.

"ಬತ್ತೀನವ್ವಾ, ಇರು ಅಂಗೆ—" ಎಂದ ಮರಿಯಣ್ಣ.

ಮುನಿಯಮ್ಮ ಪುನಃ "ಐಯ್ನೋರು ಕೂಡ ಮಾತ್ನಾಡುತ್ತಾ ಕುಂತು ಬುಟ್ರೆ ನಿನ್ಗೇನೂ ಬೇಡ." ಎಂದು ಮಗನಿಗಂದು, ದಾಸರ ಕಡೆಗೆ ತಿರುಗಿ ಮಾತನಾಡತೊಡಗಿದಳು:

"ಏನ್ಬುದ್ಧಿ, ಇವತ್ತು ಯಾವ ಕತೆ ಮಾಡ್ತೀರಾ?"

"ಯಾವ ಕತೆ ಇಷ್ಟ ಹೇಳಮ್ಮ ನಿನಗೆ . . . ನೋಡೋಣ?"

"ನಮ್ಮಿಷ್ಟ ಎಂಗಿದ್ರೆ ಏನ್ಬುದ್ಧಿ. ದೊಡ್ಡಗೌಡ್ರು ಏಳ್ದಂಗೆ ನಡೀಬೇಕೇ ಒರ್ತು . . . ನಾವೇಳಿದ್ರೆ ಆಯ್ತದ?"

"ನಡಿಯೋ ಸಂಕಲ್ಪ ಇದ್ದರೆ, ನಡದೇ ನಡೀತದಮ್ಮ . . . ಅದೆಲ್ಲಾ ಆ ಭಗವಂತನ ಇಚ್ಛೆ . . ."

"ಏನೋ ಬುದ್ಧಿ ಎಲ್ಲಿ ನಿಮ್ಗೇ ತಿಳೀಬೇಕು . . . ಶೀನ್ವಾಸ ಕಲ್ಯಾಣ ಕೇಳಿ ಶಾನೆ ದಿನಾ ಆಯ್ತು ಬುದ್ಧಿ . . ."

"ಅದೇ ನಮ್ಮ, – 'ಶ್ರೀನಿವಾಸ ಕಲ್ಯಾಣ' – ಅಂದ್ರೆ ಅಷ್ಟು ಇಷ್ಟ"

"ದೇವ್ರುದು ಬುದ್ಧಿ, ಕೇಳಿದ್ರೂನೂ ಪುಣ್ಯ ಬತ್ತದೆ."

" . . . ಅದ್ಸರಿ . . . ಮಾಡೊತಪ್ನ, ಪಾಪಾನ ಮಾಡ್ತಾನೇ ಇದ್ದುಕೊಂಡು ದೇವರನ್ನ ನೆನಸಿದರೆ ಪುಣ್ಯ ಹೇಗೆ ಬರುತ್ತದೆ?"

"ಅದೇನು ಬುದ್ಧಿ, ಅಂತ ತಪ್ನ ನಾ ಮಾಡಿರೋದು?"

"ನೀನೇ ಯೋಚನೆ ಮಾಡಿ ನೋಡು . . . . "

"ಅದೇನು ಸೀವೇ ಏಳ್ಬಿಡಿ ಬುದ್ಧಿ."

"ಅಲ್ಲವಾ . . . . ಮಗನಿಗೆ ಇಷ್ಟು ದಿನಾ ಆದರೂ ಮದ್ವೆ ಮಾಡದೇ ನೇಯೋ, ಮೊದಲನೇ ಹೆಂಡತೀನೂ ಕರೆತರದೇನೇಯೋ ಇರೋದು . . . . "

"ಅದರಾಗೇನದೆ ಬುದ್ಧಿ ತಪ್ಪು . . . . ?"

"ಏನಿದೆ ಅಂತೀಯೋನಮ್ಮ ; ಮೊದಲನೆ ಹೆಂಡತೀನ ಮದುವೆ ಮಾಡಿಕೊಂಡು ಈಗ ಅವಳನ್ನ ಬೇಡ ಅಂದ್ರೆ, ಆ ಹುಡುಗಿ ಗತಿಯೇನು? ಅವಳನ್ನ ಯಾರು ಮದುವೆ ಆಗ್ತಾರೆ - ಹೋಗ್ಲಿ ಗಂಡಸೇ . . . . ಸ್ವತಂತ್ರವಾಗಿ ಸಂಪಾದಿಸಿಕೊಂಡು, ಹೊಟ್ಟೆ ಹೊರಕೊಳ್ಳೋದಿಕ್ಕೆ. ಅವಳು ಸಾಯೋ ವರೆಗೂ ಜೀವನ ಹೇಗೆ ನಡೆಸಬೇಕು? ಎರಡನೆ ಮದುವೆಯೇನೋ ನೀನು ಮಾಡಿಬಿಡ್ತೀಯೆ ಸರಿ. ಅವ್ನು ಸಂತೋಷವಾಗಿಯೇ ಒಪ್ಪಿಬಿಡ್ತಾನೆ. ಆದ್ರೆ ಮೊದಲ್ನೆ ಹೆಂಡತಿ. . . . . ಅವಳನ್ನೂ ನೋಡ್ಕೋ ಬೇಕೋ ಬೇಡವೋ . . . . ಇದೆಲ್ಲಾ ತಪ್ಪು ಮಾಡ್ತಾ ಇದ್ದು, 'ಶ್ರೀನಿವಾಸ ಕಲ್ಯಾಣ' ಕೇಳಿ ಪುಣ್ಯ ಕಟ್ಟಿಕೊಳ್ಳೋದು ಅಂದ್ರೆ ಹೇಗೆ ಆಗುತ್ತದೆ."

" . . . . . . . . . "

"ಯಾಕವ್ವಾ ಸುಮ್ಮನಿದ್ದೀಯೇ . . . . . ಏನಾದ್ರೂ ಮಾತ್ನಾಡು."

"ಹೌದ್ಬುದ್ಧಿ, ನಿಜ ನೀವೇಳಿದ್ದು ನಿಜ. ನಾ ಮಾಡಿದ್ದು ತಪ್ಪು. ನಮ್ಮ ಉಡುಗ್ನೂ ಹಂಗೇ ಪೋಲಿ ಬಿದ್ದು, ಆ ಕೆಂಪೀ ಜೊತೇಲೇ ಇದ್ಬಿಟ್ಟ. ಇನ್ನು ನಮ್ಮ ಮನೆಯೋರಂತೂ 'ಏನೂಂತ' ವಿಚಾರ್ಸೋದಿಲ್ಲ . . . . ಇಂಗಾಗಿ ನಮ್ಗೂ ಬುದ್ಧಿ ಓಡ್ಲಿಲ್ಲ . . . . "

"ಹೋದ್ರೆ ಹೋಗ್ಲಿ ಈಗೇನ್ಮಾಡ್ತೀಯಾ?"

"ಏನ್ಮಾಡ್ಲಿ ಬುದ್ಧಿ. ಅವಳ್ನ ಕರಕೊಂಡು ಬಾ ಅಂತ ಅವನ್ಗೆ ಏಳಿದ್ರೆ, ಅವನು 'ನನಗೆ–ಸಿಗ್ಲು' ಅಂತಾನೆ. ಇನ್ನು ನಾನೇ ಓಗ್ಬೇಕು."

ಮುನಿಯಮ್ಮ ದಾಸರೊಡನೆ ಮಾತನಾಡುತ್ತಿದ್ದಂತೆಯೇ, ದೊಡ್ಡ ಗೌಡರು ದಾಸರನ್ನು ವಿಚಾರಿಸಿಕೊಳ್ಳಲು ಬಂದರು. ಮುನಿಯಮ್ಮ– ಮರಿಯಣ್ಣರು ಎದ್ದು ನಿಂತು, ಪಕ್ಕಕ್ಕೆ ಸರಿದರು. ಮಲ್ಲಿ ದಾಸರ ಪಕ್ಕದಲ್ಲಿಯೇ ಕುಳಿತು, ಅವರ ಬಟ್ಟೆಗಳನ್ನು ಚೀಲಕ್ಕೆ ಮಡಚಿ ಇಡುತ್ತಿದ್ದಳು. ಗೌಡರು ಮಾತನಾಡಲಾರಂಭಿಸಿದರು.

"ನಮಸ್ಕಾರ ದೇವ್ರು"

"ನಮ್ಮಸ್ವಾರಪ್ಪ . . . . ಬಾ ಕುಳಿತುಕೊ"

"ಇಲ್ಲಿ ಬುದ್ಧಿ . . . . ಆರೋಗ್ಯ ತಾನೆ . . . . ಊಟ ಆಯ್ತೇನು"

"ಏನೋ ಇಷ್ಟರ ಮಟ್ಟಿಗೆ . . . . ಏನು ಊಟ ಆಗುತ್ತೆ."

" . . . . . . . . . . "

"ಅದೇನು - ಇಷ್ಟು ದೂರ ಅಪರೂಪವಾಗಿ"

"ಏನೂ ಇಲ್ಲ ಬುದ್ಧಿ, ಅಂಗೇ ನಿಮ್ಮನ್ನ ನೋಡಿಕೊಂಡು ಓಗೋನ ಅಂತ ಬಂದೆ . . . . ಒಂದು ಮಾತಾಡೋದಿತ್ತು"

"ಅದೇನಪ್ಪ ಅಂತ ವಿಶೇಷ ಮಾತು."

"ಅದೇ ಬುದ್ಧಿ, ನಾಳ್ನಿಂದ ಎಂಟು ದಿನ ನಮ್ಮೂರಾಗೆ ಮಾರಿ ಪರ್ಷೆ. ಜನ ಶಾನೆ ಸೇರ್‍ತಾರೆ. ಅದ್ಕೆ ಎಂಟು ದಿನಾನು ಕತೆ ಮಾಡಿಸ್ಬೇಕೂಂತ ಇದ್ದೀನಿ. . . . . . ಅದ್ನೇ ನಿಮಗೆ ಏಳಾನ ಅಂತ ಬಂದೆ."

"ಓ ಹಾಗೋ . . . ಏನ್ಮಾಡ್ಲೀ! ನನಗೀಗ ಪುರಸೊತ್ತಿಲ್ಲ. ಹೊಸೂರು ಸಾಹುಕಾರರು ಬೇರೆ ಹೇಳಿ ಕಳಿಸಿದ್ದಾರೆ. ಅವರ ಮನೆಯಲ್ಲಿ ಬಸವ ಜಯಂತಿ ಮಾಡ್ತಾರಂತೆ. ಅದಕ್ಕೆ ಬಹಳ ಜನ ಬರ್‍ತಾರೆ. ಮೂರು ದಿನ ಒಂದೇ ಸಮನಾಗಿ ಹರಿಕಥೆ ನಡೀಬೇಕಂತೆ . . . . ಏನ್ಮಾಡೋದೋ ತಿಳೀದು!"

"ಅದೂ ದೇವ್ರ ಕಾರ್ಯ; ಇದೂ ದೇವ್ರ ಕಾರ್ಯ. ಎಲ್ಲಾ ಒಂದೇನೇ ಬುದ್ಧಿ. ನನಗ್ಯಾಕೋ ಭಾಳ ಮನಸೈತೆ ಬುದ್ಧಿ, ಕತೆ ಮಾಡಿಸ್ಲೇಬೇಕೂಂತ. . . . . ಎಂಗಾರ ಮಾಡಿ ಇದ್ಬುಡಿ ಬುದ್ಧಿ."

" . . . . ಆಗ್ಲೀಪ್ಪ ನೋಡೋಣ."

"ಏನೋ ದೇವ್ರು ನಿಮ್ಗೆ ಒಳ್ಳೇ ಬುದ್ಧಿ ಕೊಟ್ಟಂಗಯ್ತು . . . . . . ಓ ಈ ಮಗ ಯಾರ್‍ಬುದ್ಧಿ . . . . ತಮ್ಮ ಕೊಮಾರಿಯೋರೋ . . . . ?"

"ಅದೇನು ಗೌಡ, ಹಾಗೆ ಕೇಳ್ತೀಯಾ; ನೀನೋಡಿಲ್ವೇ?"

"ಇಲ್ಲ ಬುದ್ಧಿ ನೆಪ್ಪಿಲ್ಲ."

"ನಮ್ಮ ಪಾಗಟದ ಮಾದನ ಮಗಳಲ್ಲವೇ?"

"ನಮ್ಮ ದ್ಯಾವೇ ಗೌಡನ ಸೊಸೇನ ಬುದ್ಧಿ."

"ಹೂನಯ್ಯಾ, ನಿಮ್ಮ ದ್ಯಾವೇ ಗೌಡನ ಸೊಸೆ."

"ಆ ಹುಡ್ಗ ಎಂಡ್ರುನ್ನ ಬಿಟ್ಟು ಎರಡು ವರ್‍ಸಾ ಆಯ್ತು . . . . "

"ಹೌದು, ನಿನಗೇನಾದ್ರೂ ಗೊತ್ತೇನು? ಅವನು ಯಾಕೆ ಬಿಟ್ಬಾಂತ! ಅವಳ್ನ ಇವಳ್ನ ನೋಡಿಕೊಳ್ಳೋದು . . . . ಅಲ್ಲ ಬುದ್ಧಿ ಕೈಯಿಡ್ದ ಎಂಡ್ತಿ ಸಮಾನ ನೀತಿ, ನಡತೆ ಯಾವ ಹೆಂಗ್ಸಿಗೆ ಬತ್ತದೆ ಅಂತ . . . . "

ದಾಸರ ಮತ್ತು ಗೌಡರ ಮಾತನ್ನು ಕೇಳುತ್ತಾ, ಅತ್ತ ಕಡೆ ನಿಂತಿದ್ದ ಮುನಿಯಮ್ಮ ಮರಿಯಣ್ಣರಿಗೆ ಆಶ್ಚರ್ಯವಾಯಿತು. ಮರಿಯಣ್ಣನಿಗಂತೂ ಮಲ್ಲಿ ಇಲ್ಲಿ ಹೇಗೆ ಬಂದಳೆಂಬುದು ತಿಳಿಯಲಿಲ್ಲ. ಅವನ ತಾಯಿಗೂ ಅಷ್ಟೆ. ಮರಿಯಣ್ಣ ಒಮ್ಮೆ ಮಲ್ಲಿಯ ಕಡೆ ನೋಡಿದ. ಮುಖ ಕಾಣದಂತೆ ಸೆರಗು ಹೊದ್ದುಕೊಂಡಿದ್ದ ಮಲ್ಲಿ ಮನಸ್ಸಿನಲ್ಲಿಯೇ ನಕ್ಕಳು.

ದಾಸರು ಮುನಿಯಮ್ಮನ ಕಡೆ ತಿರುಗಿ "ಏನು ಮುನಿಯಮ್ಮ, ನಿನ್ನ ಸೊಸೇನ ನೋಡಿದೆಯಾ?" ಎಂದರು. ಮುನಿಯಮ್ಮ ಸುಮ್ಮನೆ ನಿಂತಿದ್ದಳು. ಗೌಡರೂ ಮುಂದೇನಾಗುವುದೋ ಎಂದು ಕಾದು ಕುಳಿತರು. ಮರಿಯಣ್ಣ "ತಪ್ಪು ಮಾಡ್ದೆ ಬುದ್ಧಿ; ತಪ್ಪು ಮಾಡ್ದೆ. ಗೌಡಣ್ಣೋರು ಏಳಿದ್ದು ನಿಜ. ಅವಳು ನನ್ನ ಎಂಡ್ತಿ ಆಗೋಕೆ ನಾನು ಎಷ್ಟು ಪುಣ್ಯ ಮಾಡಿ ಬಂದಿದ್ನೋನೋ. ನನ್ನ ಎಂಡ್ತಿ ಅನ್ನೋಕಿಂತ ನಿಮ್ಮ ಮಗಳು ಅಂದ್ರೆ ಒಪ್ತದೆ" ಎಂದು ದಾಸರ ಕಾಲಿಗೆ ಬಿದ್ದ. ಮುನಿಯಮ್ಮ ತನ್ನ ತಪ್ಪಿಗಾಗಿ ಪಶ್ಚಾತ್ತಾಪದಿಂದ ತಲೆ ತಗ್ಗಿಸಿದಳು. ದಾಸರು ಅವನನ್ನು ಎಬ್ಬಿಸಿ, ಮಲ್ಲಿಯನ್ನು ಕರೆದು "ಏನು ಮಲ್ಲೀ, ಗಂಡನ ಮನೆ ಸೇರ್ದೆ ಅಂತ ನನ್ನ ಮರೀ ಬೇಡ. ಅವನು ಹೇಳಿದ ಹಾಗೆ ಕೇಳಿಕೊಂಡು ಸರಿಯಾಗಿ ನಡೀಬೇಕು. ನೀನೂ ಅಷ್ಟೆ ಮರಿಯಣ್ಣ; ನಿನ್ನ ಹೆಂಡತೀನ ಬಾಯಿಗೆ ಬಂದ ಹಾಗೆಲ್ಲಾ ಅನ್ನಬೇಡ. ಗಂಡ–ಹೆಂಡಿರು ಹೊಂದಿಕೊಂಡಿದ್ದರೇನೇ ಸಂಸಾರ. ಹಾಗಿಲ್ಲದೆ ಇದ್ದರೆ ಏನೂ ಸುಖವಿಲ್ಲ" ಎಂದರು. "ಸತ್ಯವಾಗೀನೂ ನೀವೇಳ್ದಂಗೆ ನಡೀತೀನಿ ಬುದ್ಧಿ" ಎಂದ ಮರಿಯಣ್ಣ. ಮುನಿಯಮ್ಮನಂತೂ ಸುಮ್ಮನೆ ನಿಂತುಬಿಟ್ಟಿದ್ದಳು. ಇದೆಲ್ಲವನ್ನೂ ನೋಡುತ್ತಿದ್ದ ಗೌಡರು "ಇವೆಲ್ಲ ಏನು ಬುದ್ಧಿ" ಎಂದು ಕೇಳಿದರು. ದಾಸರು ಎಲ್ಲವನ್ನೂ ವಿಶದವಾಗಿ ವಿವರಿಸಿಯಾದ ಮೇಲೆ ಗೌಡರು "ಬುದ್ಧಿ, ದೇವರು ನಿಮ್ಗೆ ಸಾವಿರವರ್ಸ ಆಯುಸ್ಸು ಕೊಡ್ಲಿ ಬುದ್ಧಿ. ಇಂತ ಉಪಕಾರ ಮಾಡೋ ಬುದ್ಧಿ ಯಾರ್ಗೆ ಬತ್ತದೆ" ಎಂದು ಕೊಂಡಾಡಿ ದಾಸರಿಗೆ ಅಡ್ಡ ಬಿದ್ದ. "ಹಾಗಲ್ಲ ಗೌಡ, ಇವೆಲ್ಲ ಮನುಷ್ಯನ ಜೀವನದಲ್ಲಿ ಬರೋವೆ. ಆದರೆ ನಾವು ಗಮನಕ್ಕೆ ತೆಗೆದುಕೊಂಡು, 'ಸಹಿಸಬೇಕು, ಸೈರಿಸಬೇಕು, ಪರರಿಗುಪಕಾರ ಮಾಡಿ

ಬದುಕಬೇಕು ಮನುಜಾ . . . . ' ಅಂದ ಹಾಗೆ ಬಂದ ಎಲ್ಲಾ ಕಷ್ಟಗಳನ್ನೂ ಸಹಿಸಿ, ಸೈರಿಸಿ ನಮ್ಮ ಕೆಲಸ ಸಾಧಿಸಬೇಕು" ಎಂದರು. "ನಿಜ ಬುದ್ಧಿ ನಿಜ. ದೇವ್ರಂಥ ಮನುಸ್ರು ನೀವು" ಎಂದ ಗೌಡ. ಅಷ್ಟರಲ್ಲಿ ದೇವಸ್ಥಾನದ ಪೂಜಾರರು, ಮಧ್ಯಾನ್ಹದ ಪೂಜೆ ಮಾಡಲು ಗಂಟೆ ಬಾರಿಸಿದರು. ದಾಸರು ಮರಿಯಣ್ಣ ತಂದಿದ್ದ ಹಾಲು ಬಾಳೇ ಹಣ್ಣುಗಳನ್ನು ದೇವರಿಗೆ ನೈವೇದ್ಯ ಮಾಡಿಸಿ, ಮರಿಯಣ್ಣ, ಮಲ್ಲಿ, ಮುನಿಯಮ್ಮ ಮತ್ತು ಗೌಡರಿಗೆ ಹಂಚಿ, ತಾವೂ ಮಿಕ್ಕಿದುದನ್ನು ತೆಗೆದುಕೊಂಡರು. ಮಲ್ಲಿ ದಾಸರಿಗೂ - ಗೌಡರಿಗೂ, ನಮಸ್ಕರಿಸಿ ಗಂಡನೊಡನೆ ಮನೆಗೆ ಹೊರಟಳು. ಅವರಿಬ್ಬರೂ ಇನ್ನೂ ಮಾತನಾಡುತ್ತಾ ಬಹಳ ಹೊತ್ತು ಹಾಗೆಯೇ ಕುಳಿತಿದ್ದರು.



# ಅದು ಅವನ ತಪ್ಪೇನು?

**ಕು. ಶಿ. ಹರಿದಾಸ ಭಟ್ಟ**

ನಾಲ್ಕು ಸೈಕಲ್ ದೂರದಲ್ಲಿ ಬರುವುದನ್ನು ಕಂಡಕೂಡಲೇ ದೂಮ ಪೂಜಾರಿ ಜಲ್ಲ ಬೇಗಬೇಗನೇ ಒತ್ತುವುದಕ್ಕೆ ಆರಂಭಿಸಿದ. ಅವನ ದೋಣಿ ನೀರನ್ನು ಸುಯ್ಯೆಂದು ಸೀಳಿಕೊಂಡು ಕಡವಿನ ಕರೆ ಮುಟ್ಟುವುದರ ಮೊದಲೇ ಆ ನಾಲ್ಕು ಸವಾರರು ಸೈಕಲಿಂದಿಳಿದು ಸೈಕಲನ್ನು ದೂಮನಿಗೊಪ್ಪಿಸಲು ಸಿದ್ಧರಾಗಿದ್ದರು. ದೂಮ ಆಚೆ ಕಡವಿನಿಂದ ತಂದ ಪ್ರಯಾಣಿಕರನ್ನಿಳಿಸಿದ. ಸೈಕಲನ್ನು ಒಂದೊಂದಾಗಿ ದೋಣಿಯೊಳಗಿರಿಸಿದ. ನಾಲ್ಕನೆಯದನ್ನಿಡಬೇಕಾದರೆ ಮೂಡುಕಡೆ ನೋಡಿದನೊಮ್ಮೆ. ಸೈಕಲ್ ಸವಾರರ ಹತ್ತಿರ ''ಕಡವಿನ ಕಾಸು ಬೇಗ ಕೊಡೀರಿ; ಮಳೆ ಬರುವುದರೊಳಗೆ ರಾಯಲ್ ಮೆಯಿಲಿನ ಹಾಂಗೆ ಅತ್ತಕಡೆ ಒಯ್ದುಬಿಡತೀನಿ'' ಅಂದ. ಮೇಲಿಂದ ಕಡವಿನ ಸ್ಯಾಬರ ಸ್ವರ ಕೇಳಿಸಿತು: ''ದೂಮಾ! ಮೊನ್ನೆ ಕಾರ್ಕಳದವರಿಗೆ ಆದ ಹಾಗೆ ಮಾಡಬೇಡ ಮಾರಾಯಾ ಎಲ್ಲಾದರೂ. ಅಲ್ಲ, ಅವರೀಗೆ ನಡುದಾರೀಲಿ ಜಂಗಲ್ ದೋಣಿ ಸಿಕ್ಕಿದ್ದರಿಂದ ಬಚಾವಾದ್ರಂತ. ಅಲ್ದೆ ಇವತ್ತಿನ ಮೋಡ ಮೊನ್ನಿಗಿಂತಲೂ ಜೋರೇ ಉಂಟು. ಅಕಾ, ಗಾಳಿ ಬತ್ತ್; ಸ್ವಲ್ಪ ತಾಳು. ಮೋಡ ಹಿರೀಲಿ ಗಾಳಿಗೆ.''

ಹೌದು, ಸ್ಯಾಬರು ಹೇಳಿದ್ದು ನಿಜವಾಯಿತು. ಗಾಳಿ ಜೋರಾಗಿ ಬೀಸಿತು. ಯಾವ ದಿಕ್ಕಿಗೆ ಬೀಸುವುದೆಂಬುದು ತಿಳಿಯಲಾಗಲಿಲ್ಲ. ಹತ್ತು ದಿಕ್ಕಿಗೂ ಬೀಸಿತು – ಒಮ್ಮೆ ಮೂಡಲಿಗೆ ಆದರೆ ಇನ್ನೊಮ್ಮೆ ಬಡಗಲಿಗೆ ಬೀಸಿದಂತೆ ಕಾಣುವುದು. ದೋಣಿಯೊಳಗೆ ಕಾಲಿಟ್ಟ ಸವಾರರು ಕಾಲ್ತೆಗೆದರು. ಅವರಿಗೆ ಕಾರ್ಕಳದವರ ಕತೆ ಭಯವನ್ನುಂಟುಮಾಡಿತು. ಅಲ್ಲದೆ ಹೊಳೆಯ ಮೇಲೆ ಮೂಡಲಲ್ಲಿ ಒಟ್ಟುಗೂಡಿದ ಕಾರ್ಮೋಡದ ರಾಶಿ ನೋಡಿದವ ಎಂಥ

ಯೋಧನೇ ಆದರೂ ಹಿಂಜರಿಯಬೇಕಾಗಿತ್ತು. ನೀರು ಅಂದವಾಗಿ ತೆರೆಯೆಬ್ಬಿಸುವುದನ್ನು ಬಿಟ್ಟು, ಗಾಳಿಯ ದೆಸೆಯಿಂದ ಸುಚ್ಚಾಬಟ್ಟೆ ಸೆಳೆತಕ್ಕೀಡಾಗಿ ನೀಳ ನೀಳವಾದ ಗೆರೆಗಳನ್ನು ಕಾಣಿಸುತಿತ್ತು.

ಸ್ವಾಬರಿಗೆ ಕಾರ್ಕಳದವರ ಕತೆ ಮುಂದುವರಿಸುವ ಇಚ್ಛೆ ಇತ್ತು. ಪೇಟೆಯವರು ನಡುನೀರಲ್ಲಿ ಜೀವಕ್ಕಂಜಿ ಪಾಡುಪಡುವುದನ್ನು ಕಂಡರೆ ಹಳ್ಳಿಗಾಡಿನ ಜನರಿಗೆ ಒಂದು ಬಗೆಯ ಕುತೂಹಲ, ಆತುರ, ಸಂತೋಷ.

"ಕಾರ್ಕಳದವರು ಅಂದೆನಲ್ಲ? ಆ ದೊಡ್ಮನೇಯವರು. ಎಲ್ಲೋ ಬಾರ್ಕೂರಿನಲ್ಲಿ ಮದುವೆ ಇತ್ತಂತೆ, ಬಂದರು. ಹೆಂಗಸರು, ಗಂಡಸರು ಎಲ್ಲಾ ಇದ್ದರು. ಓ, ಅಲ್ಲಿ ಕುದುರು ಕಾಣೋದಿಲ್ವೇ, ಅದರ ಹತ್ತಿರ ಹತ್ತಿರ ಹೋಗುವಷ್ಟಕ್ಕೆ ತಕೊಳ್ಳಿ ಗಾಳಿ. ದೋಣಿ ಗಿರಿಗಿರಿ ಸುತ್ತೋದಕ್ಕೇ ಸುರು. ಪುಣ್ಯಕ್ಕೆ ಒಂದು ಕಾರು ಹೊತ್ತುಕೊಂಡು ಆಚೇ ಕಡೆಯಿಂದ 'ಜಂಗಲ್' ಬರ್ತಿತ್ತು. ಇಲ್ಲಾದ್ರೆ ನಾಲ್ಕು ನಾಲ್ಕು ಗುಟುಕು ಕಲ್ಯಾಣಪುರ ಹೊಳೇ ನೀರಿನ ರುಚಿ ನೋಡಿಯೇ ಮದುವೆಗೆ ಹೋಗುತ್ತಿದ್ದರು."

ಸವಾರರಿಗೆ ಈ ಕತೆ ಮೆಚ್ಚುಗೆಯಾದಂತೆ ತೋರಲಿಲ್ಲ. ಆ ಕಾರ್ಕಳದವರು ಹೊಳೆದಾಟಿದ ಉದ್ದೇಶವೂ, ಅವರು ಬಂದ ಉದ್ದೇಶವೂ ಒಂದೇ. ಸನ್ನಿವೇಶ ವಾತಾವರಣ ಎಲ್ಲ ಅದೇ. ಆದ್ದರಿಂದ ಎರಡು ಎರಡು ಕೂಡಿಸಿದರೆ ನಾಲ್ಕಾಗುವುದು. ಹೌದು, ತಮ್ಮ ಗತಿಯೂ ಅದೇ ಆಗಬೇಕು ಎಂದು ಅವರೆನಿಸಿದರು.

ಒಬ್ಬ ಗಟ್ಟಿಗನೆಂದ "ಮದುವೆಗೆ ಹೋಗದಿದ್ದರೂ ಚಿಂತಿಲ್ಲ. ನೀರ ಮದುವೆ ಬೇಡ."

ಮತ್ತೊಬ್ಬ "ಹೌದು, ನಾನು ಹೇಳೋದೂ ಅದೇ. ಅಲ್ಲಿ ಕಾಣುವ ಮೋಡ ಒಂದೇ ಮಳೆ ಸುರಿಸಿ ನಿಕಾಲಿ ಆಗ್ಬೇಕು. ಇಲ್ಲಾ, ನಮ್ಮ ಕಣ್ಣಿಗೆ ಕಾಣಿಸದ ಹಾಗೆ ದೂರಹೋಗಬೇಕು" ಅಂದ.

ಮೂರನೆಯ ಸಾಹಸಿ "ಏನೋ ಏನೋ! ಇಷ್ಟು ಹೊತ್ತಿಗೆ ನಾವು ಆಚೆ ದಡ ಸೇರಿ ಆಗುತ್ತಿತ್ತು. ಮೊನ್ನೆ ನಾವು ಹೋದಾಗ ಇದಕ್ಕಿಂತಲೂ . . . . ." ಎಂದು ಗತಪುರಾಣ ವಾಚನಕ್ಕೆ ತೊಡಗಿದ.

ನಾಲ್ಕನೆಯವ ಮೌನವಾಗಿ ಬಂದದ್ದೆಲ್ಲ ಬರಲಿ ಎಂದು ಪ್ರಕೃತಿಯ ಭೀಷಣತೆಯ ಕುರಿತು ಚಿಂತನೆಯಲ್ಲಿದ್ದ. ಕವಿಸಹಜ ಹೃದಯವಾತನದು.

ಈ ಚಿಲ್ಲರೆ ಸಮಾಚಾರಗಳ ನಿಗಾಮಾಡದೆ ಅನಂತದಲ್ಲಿ ವಿಲೀನವಾಗಿತ್ತವನ ಮನಸ್ಸು.

ದೂಮ ಸೈಕಲುಗಳನ್ನು ಒಂದೊಂದಾಗಿ ತೆಗೆದಿಡುವುದಕ್ಕೆ ಹತ್ತಿದ. ನಾಲ್ಕು ಹನಿ ಮಳೆಯೂ ಬಿತ್ತಾಗ. ಹತ್ತಿರದಲ್ಲೇ ಚಿಕ್ಕದೊಂದು ಹಾಳುಬಿದ್ದ ಅಂಗಡಿ ಇತ್ತು. ಮಡಲಿನ ಮಾಡಿನಡಿ ಸೈಕಲುಗಳನ್ನು ಸಿಲಿಸಿ, ಮೊದಲೇ ಅದರ ಮರೆಸೇರಿದ್ದ ವೀರ ಸವಾರರನ್ನು ಕೂಡಿಕೊಂಡ ದೂಮ.

ದೂಮ ಒಬ್ಬನೇ ಆದರೆ ಎಂಥ ಮಳೆಗಾಳಿಯಲ್ಲಾದರೂ ದೋಣಿ ನಡೆಸಿ ಕೊಂಡು ಹೋಗಿಯಾನು. ಆದರೆ ಪೇಟೆಯವರ ಕತೆ ಕಷ್ಟ. ನಡುದಾರಿ ಯಲ್ಲಿ ಮತ್ತೆ ಅತ್ತುಬಿಡಲಿಕ್ಕೂ ಹಿಂದೆ ಹೋಗಲಾರರು. ದೂಮನಿಗೆ ಪೇಟೆ ಯವರ ಪುಕ್ಕುತನ ಹೊಸ ಅನುಭವವೇನೂ ಅಲ್ಲ. ದಿನವೂ ಒಂದು ಮೂವತ್ತು ನಾಲ್ವತ್ತು ಸರದಿ ಟ್ರಿಪ್ ಹೊಡೆಯುವ—ಆಚೆ ಕಡವಿಂದ ಈಚೆ ಕಡವಿಗೆ, ಇಲ್ಲಿಂದ ಅಲ್ಲಿಗೆ— ಅವನಿಗೆ ಇಂಥ ಅಸಾಮಿಗಳು ಒಂದೆರಡಾದರೂ ಸಿಕ್ಕೇ ಸಿಗುತ್ತಾರೆ.

ಗಾಳಿ ಕಡಿಮೆಯಾಗುವ ಚಿಹ್ನೆ ಕಾಣಲಿಲ್ಲ. ಮಳೆ ಹಿಡಿದೇಬಿಟ್ಟಿತು. ಅಂಥ ಸೆಕೆ ಇದ್ದುದು ಒಮ್ಮೆಂದೊಮ್ಮೆ ತಂಪಾಯಿತು. ಸವಾರರಲ್ಲಿ ಕವಿ ಹೃದಯಿಯ ಹೊರತು ಉಳಿದವರೆಲ್ಲರೂ ಗಂಟಲು ಬಿಸಿಮಾಡಲು ಹೋಟೆಲು ಹೊಕ್ಕರು. ಕವಿಗೆ ದೂಮನ ವೇಷ ಕಂಡು ಅವನ ಕತೆ ಕೇಳುವ ಆಸೆ ಉಂಟಾಯಿತು. ಆ ಮೂವರು ಹೋದ್ದು ಒಳಿತೇ ಆಯಿತು.

ಒಂದಾನೊಂದು ಕಾಲದಲ್ಲಿ ಬಿಳಿ ಬಣ್ಣದ್ದಾಗಿರಬಹುದಾದ ನಾಲ್ಕು ಮೊಳದ ಬಟ್ಟೆಯೊಂದು ದೂಮನ ನಡುವನ್ನಲಂಕರಿಸಿತ್ತು. ಮೇಲೆ ಒಂದು ಅರೆಗೈ ಅಂಗಿಯನ್ನು ತೊಟ್ಟಿದ್ದ. ಅವನಿಗೆ ಬಣ್ಣಬಣ್ಣದ ಚೌಕಳಿ ಅಂಗಿ ಯೆಂದರೆ ಇಷ್ಟ. ಬ್ರಹ್ಮಾವರ ಪೇಟೆಯಲ್ಲಿ ಕಾಮತರ ಅಂಗಡಿಯಲ್ಲಿ ಪಡ ಕೊಂಡಿದ್ದ ಈ ಅರ್ಧಾಂಗಿಯನ್ನು - ಒಂದು ತಿಂಗಳ ಹಿಂದೆ. ಬಣ್ಣ ಗ್ಯಾರಂಟಿ ಕಾಮತರ ಬಾಯಲ್ಲಿ ಮಾತ್ರ. ಒಂದು ಸಲದ ನೀರಿಗೇನೆ ರಂಗುಬಿಟ್ಟು ಹೊಸ ಬಣ್ಣ ತಾಳಿತ್ತು.

ದೂಮ ಹೇಳಿದ ಕತೆ ಇದು:— ಆಚೆದಡದ ಭದ್ರಗಿರಿಯಲ್ಲಿ ಹೊಳೆಗೆ ತಾಗಿಕೊಂಡೇ ದೂಮನ ಹೆಂಡತಿಯ ಮನೆ. ನಾಲ್ಕು ಪಿಳ್ಳೆಗಳು ಮದುವೆ

ಯಾದ ನಾಲ್ಕು ವರ್ಷದಲ್ಲೇ ಅವತರಿಸಿಬಿಟ್ಟಿದ್ದವು. ಅದೂ ರೇಶನ್ ಕಾಲ ದಲ್ಲೇ ಹುಟ್ಟಿದವುಗಳು.

– ದಿನ ಇಡೀ ದುಡಿದರೆ ಹುಟ್ಟುವುದು ಒಂದೆರಡು ರೂಪಾಯಿ ಕಾಸು. ಅದೂ ನಿಜದ್ದಲ್ಲ, ಒಂದು ದಿನ ಮೂರು ರೂಪಾಯಿ ಸಿಕ್ಕಿದರೆ ಮತ್ತೆ ಮೂರು ದಿನ ಒಟ್ಟು ಮೂರು ರೂಪಾಯಿಯಲ್ಲಿ ಕಾಲಯಾಪನೆ ಮಾಡಬೇಕು. ಮಕ್ಕ ಳಿನ್ನೂ ಪಾವಕ್ಕಿ ಊಟಮಾಡುವ ಪ್ರಾಯಕ್ಕೆ ಬರಲಿಲ್ಲಾದ್ದರಿಂದ ಸ್ವಲ್ಪ ವಾಸಿ. ಎರಡು ಹೊತ್ತು ಗಂಜಿಗೆ ಅಡ್ಡಿಯಿಲ್ಲ.

– ಅಲ್ಲದೆ ಗುಡಿಸಿಲಲ್ಲಿ ಸುತ್ತು ನಾಲ್ಕು ತೆಂಗಿನಮರಗಳು ಇವೆ ಹೊಳೆ ಸಾಲಿನಲ್ಲಿದ್ದದ್ದರಿಂದ ವರ್ಷಕ್ಕೊಂದು ನಾಲ್ನೂರು ನಾಲ್ನೂರೈವತ್ತು ಕಾಯಿಗೆ ಮೋಸ ಇಲ್ಲ. ಅದನ್ನು ಮಾರಿ ಮನೆಗೆ ಹುಲ್ಲು ಹೊದೆಯಿಸಬೇಕು, ಮಕ್ಕಳಿಗೆ ಅಂಗಿ ಹೊಲಿಸಬೇಕು, ಹೆಂಡತಿಗೆ ಸೀರೆ ತರಬೇಕು. ತೆಂಗಿನಕಾಯಿ ದರ ಈಗ ಸ್ವಲ್ಪ ಏರಿಕೆಯಲ್ಲೇ ಇರುವುದರಿಂದ ತಕ್ಕಮಟ್ಟಿನ ವಿಲೆವಾರಿ ಮಾಡುವುದ ಕ್ಕಾಗುತ್ತೆ.

–'ಪ್ರೊಹಿಬಿಶನ್' (ಪಾನನಿರೋಧ) ಬಂದಂದಿನಿಂದ ದಿನಕ್ಕೆ ಎಷ್ಟು ಸಿಕ್ಕಿದರೂ ಹಿಂದಿಗಿಂತ ಎರಡಾಣೆ ಜಾಸ್ತಿ ಉಳಿಯುವುದಕ್ಕಡ್ಡಿಯಿಲ್ಲ. ಕಳ್ಳು ಕುಡಿಯುವುದು ದೇಹಕ್ಕೊಳ್ಳೇದಲ್ಲವೆಂದು ದೂಮನಿಗೆ ಬೇರೆಯವರು ಉಪ ದೇಶ ಮಾಡಬೇಕಾಗಿರಲಿಲ್ಲ. ಅವನ ತಂದೆ, ಅಜ್ಜ ಎಲ್ಲ ಕಲ್ಲು ಕುಡಿಯುವುದ ರಲ್ಲಿ ಭಾರೀ ಹೆಸರುಹೋದವರು. ಎಷ್ಟು ಕುಡಿದರೂ ಭಾನ ತಪ್ಪೋವರಲ್ಲ. ವಂಶದ ಗುಣ ದೂಮನಿಗೂ ಬಂದಿತ್ತು. ಮದುವೆ ಮಾಸರಿ ಇದ್ದ ದಿನ ಸ್ವಲ್ಪ ಹೆಚ್ಚು ಕಾಸಾದರೆ ಮೂಗಿನ ವರೆಗೆ ಕುಡಿದೇ ಗುಡಿಸಲನ್ನು ಕಾಣಬೇಕು. ಆ ದಿನ ಹೆಂಡತಿ ಸೀತುವಿಗೆ ಒದೆ, ಬೈಗಳು ಬೇಕಾದಷ್ಟು. ಮಕ್ಕಳು ರಾತ್ರಿ ಯಲ್ಲೆಚ್ಚತ್ತು ಕಿರಚಾಡೋದಕ್ಕೆ ಹತ್ತಿದರೆ ಅವುಗಳ ಬೆನ್ನಿಗೆ ಮರುದಿವಸ ಎಣ್ಣೆ ಹಚ್ಚಿ ತಿಕ್ಕಬೇಕು. ಸರಕಾರ ಒಂದು ಸಂಗ್ತಿ ಒಳ್ಳೇದೇ ಮಾಡಿತು. ಹೆಂಡತಿಗೆ ಮಕ್ಕಳಿಗೆ ದೂಮ ಹೊಡೆಯುತ್ತಿದ್ದುದು ನಿರುಪಾಯನಾಗಿ–ಕೈಮೀರಿ ಯಾತ ಕ್ಕಾಗಿಯೋ ಏನೋ ತುಂಬಾ ಕುಡಿದ ದಿನ ಬೇರೆಯವರು ಅತ್ತರೆ ಅದು ದೂಮ ನಿಗೆ ಕಾಣುವುದು ನಗುವಿನಂತೆ. ಹೀಗಾಗಿ ಆತ ಅವರನ್ನು ಇನ್ನೂ ಇನ್ನೂ ನಗಿಸುತ್ತಿದ್ದ. ಕಳ್ಳಂಗಡಿ ಇದ್ದಷ್ಟು ದಿವಸ ಸತ್ಯದ ಸೇವೆ ಸಲ್ಲಿಸದಿದ್ದರೆ ಸೀತು ಇಕ್ಕಿದ ಅನ್ನಕ್ಕೆ ಉಪ್ಪು ಕಡಿಮೆ ಆದ ಹಾಗೆ ತೋರುತಿತ್ತು, ತೆಂಗಿನಮರ ತಲೆ

ಕೆಳಗಾಗಿ ನಿಂತಂತೆ ಕಾಣುತ್ತಿತ್ತು. ಆದ್ದರಿಂದ ಸತ್ತುಕೊಳ್ಳಲಿ ಎಂದು ಕುಡಿದೇ ಬಿಡುತ್ತಿದ್ದ. ಈಗ ಸರಕಾರ ಕಳ್ಳು ತೆಗೆದಮೇಲೆ ನಾಲ್ಕು ಸಲ ಹೆಚ್ಚಾಗಿ ಕಾಫಿ ಕುಡಿದುಬಿಡುವ.

ಕತೆ ಇನ್ನೂ ಮುಗಿದಿರಲಿಲ್ಲ. ಮಳೆ ಬಿಟ್ಟಿತು; ಗಾಳಿ ತಟಸ್ಥವಾಯಿತು; ಮೋಡ ಚದರಿತು. ದೂಮು, ಸೈಕಲುಗಳೂ ಸವಾರರೂ ನಿಧಾನವಾಗಿ ದೋಣಿ ಹತ್ತಿದರು. ದೋಣಿ ಹೊರಟಿತು.

ಕವಿ ತಿರುಗಿ ಯೋಚನೆಗಿಳಿದ. ಕಣ್ಣು ಒಮ್ಮೆ ಬಾನಿನ ಕಡೆಗೂ, ಒಮ್ಮೆ ನೀರಿನೊಳಗಿಂದ ಥಳಥಳನೆ ಹೊಳೆದು ತೋರುತ್ತಿದ್ದ ಹೊಳೆಯ ಮಳಲಿನ ಕಡೆಗೂ ತಿರುಗುತ್ತಿತ್ತು. ಸರಕಾರದ ಪಾನನಿರೋಧ ನೀತಿ ಬರಿಯ ಒಂದು ರಾಜಕೀಯ ಡೊಂಬರಾಟವೆಂದು ಆತ ಬಗೆದಿದ್ದ. ಅದರ ಪ್ರತ್ಯಕ್ಷ ಪರಿಣಾಮ ವೇನೆಂಬುದಕ್ಕೆ ಸಜೀವ ಸಾಕ್ಷಿ ದೊರೆಯಿತೆಂದು ಆತ ಮನದೊಳಗೆ ಹಿಗ್ಗಿದ. ಇಂಥ ಎಷ್ಟು ಕುಟುಂಬಗಳಿವೆಯೋ ಇನ್ನೂ!

ಮಳೆ ಇನ್ನೂ ತುಸುಕಾಲ ಬಂದಿದ್ದರೆ ದೂಮುಪೂಜಾರಿ ಇನ್ನೂ ಒಂದು ಕತೆ ಹೇಳುತ್ತಿದ್ದ. ಮಳೆ ಹೊರಗನಿಂದ ಜೋರಾಗಿ ಬರುತ್ತಿದ್ದರೆ ಯಾರಿಗೂ ತಮ್ಮ ಕತೆಯನ್ನು ಹೇಳಿಕೊಂಡೇ ಇರೋಣವೆಂದೆನಿಸುತ್ತೆ. ದೂಮುನಿಗೆ ರಂಗುಹಚ್ಚುವ ಚಾಪಲ್ಯ ಹೆಚ್ಚು. ಆದರೆ ಆತ ಮುಂದುವರಿಸಬಹುದಾಗಿದ್ದ ಕತೆ ರಂಗು ಹಚ್ಚದೇನೇ ಸ್ವಾರಸ್ಯವಾಗಿರುತ್ತಿತ್ತು.

ಒಂದು ಅಮಾವಾಸ್ಯೆ ರಾತ್ರಿ; ದೂಮು ದೋಣಿ ಹಿಡಿದುಕೊಂಡು ಉಪ್ಪೂರಿಗೆ ಹೋಗಿದ್ದ. ದೋಣಿ ವ್ಯಾಪ್ತಿ ಹಿಡಿಯುವ ಮೊದಲು ದೂಮು ಉಪ್ಪೂರಿನಲ್ಲಿ ವರ್ಗದಾರರೊಬ್ಬರ ಕೈಕೆಳಗೆ ಬೆಲ್ಲಮಾಡುವ ಕೆಲಸದಲ್ಲಿದ್ದ. ವರ್ಷದಲ್ಲಿ ಜೋರಿನ ಕೆಲಸ ಎಂದರೆ ಬೇಸಗೆ ಮೂರು ತಿಂಗಳು. ಆ ಮೇಲೆ ದೊಡ್ಡ ಧನಿಯರ ಬೆನ್ನ ಹಿಂದೆ ಅಲೆದಾಡುವುದು; ಅವರದ್ದೇ ದೋಣಿ ಇತ್ತು—ಅದನ್ನು ಧನಿಯರಿಗೆ ಬೇಕಾದಾಗ ನಡೆಯಿಸುವುದು; ಇಷ್ಟೇ ಕೆಲಸ. ಈಗ ಆರು ವರ್ಷದ ಹಿಂದೆ ಧನಿಯರಲ್ಲಿ ಒಂದು ಭಾರೀ ಕೋಲವಾಯಿತು. ಅದರಲ್ಲಿ ನಡುವೆ ಏನೋ ಜಗಳವೆದ್ದು ಎರಡು ಬಣವಾಗಿ, ಕೈಗೆ ಕೈ ತಾಗಿಬಂತು. ದೂಮು ಒಂದು ಬಣದ ಮುಖಂಡ. ಅವನ ಇದಿರಾಳಿ ಧನಿಯರಿಗೆ ಅಚ್ಚು ಮೆಚ್ಚಿನವ. ಆ ಗೌಜಿಯಲ್ಲಿ ದೂಮುನಿಗೆ ಮೈಮೇಲಿನ ಪರವೆ ಇರಲಿಲ್ಲ. ವಿರೋಧಿಯನ್ನು ಚೆನ್ನಾಗಿ ಬೈದು ನಾಲ್ಕು ಕೊಟ್ಟುಬಿಟ್ಟಿದ್ದ. ಮರುದಿವಸವೇ

ಉಪ್ಪೂರಿನಿಂದ ಗಡೀಪಾರು ದೂಮನಿಗೆ. ಆ ದಿವಸದಿಂದ ದೂಮ ಉಪ್ಪೂರಲ್ಲಿ ಕಾಲಿಡಲಿಲ್ಲ. ಆದರೆ ಅಮಾವಾಸ್ಯೆ ದಿನ ಧನಿಯರ ಆಳು ಬಂದು 'ದೂಮಾ, ಧನಿಯರು ನೆನಪುಮಾಡಿದ್ದಾರೆ; ಅಗತ್ಯ ಬರಬೇಕಂತೆ. ಸಾಯಂಕಾಲ ಬಂದರೆ ಸಾಕು' ಎಂದಾಗ, ದೂಮನಿಗೆ ಏನೋ ಅಂತಹ ಮಹಾ ಜಂಬರ ಇಲ್ಲದೆ ಧನಿ ತನ್ನ ಸ್ಮರಣೆ ಮಾಡಲಿಕ್ಕಿಲ್ಲ ಎಂದು ತಿಳಿದ ಮನಸ್ಸು ಇಬ್ಬಗೆಯಾಗಿತ್ತು. ಕಡೆಗೆ 'ಎಂಟು ಹತ್ತು ವರ್ಷ ಉಪ್ಪನ್ನ ಕೊಟ್ಟವರನ್ನ ಬಿಟ್ಟುಹಾಕಬಾರದು' ಎಂದು ಮನಕರಗಿ ಎದೆ ಗಟ್ಟಿಮಾಡಿಕೊಂಡು ಉಪ್ಪೂರಿಗೆ ಬಂದಿಳಿದ.

ಧನಿಯರು ಮನೆಬಾಗಿಲಲ್ಲಿ ಕಾದುಕೂತಂತೆ ಕಂಡಿತು. ದೂಮನನ್ನು ಕಂಡಕೂಡಲೇ ಬಹುವಚನದಲ್ಲೇ ಮಾತೆತ್ತಿದರು.

"ಹೋ ಹೋ ಹೋ ದೂಮಪೂಜಾರಿಗಳು ಬನ್ನಿ. ಏ ತನ್ಯಾ, ದೂಮ ನಿಗೆ ಕಾಫಿ ತಂದುಕೊಡೋ ಒಳಗಿಂದ" ಎಂದರು.

ದೂಮ ಧನಿಗಳನ್ನು ಕಂಡು ಸೊಂಟವು ಭೂಮಿಗೆ ಸಮಾನಾಂತರವಾದ ರೇಖೆಯಲ್ಲಿರುವಂತೆ ಬಗ್ಗಿಸಿದ್ದವ ಮಾತು ನಿಂತಕೂಡಲೇ ನೆಟ್ಟಗಾದ. ತನಿಯನ ಕಾಫಿ ತಟಕ್ಕನೆ ಸೃಷ್ಟಿಯಾಗಿ ಅವನ ಮುಂದೆ ಗ್ಲಾಸು ತುಂಬ ತುಂಬಿನಿಂತಿತ್ತು. ತನಿಯನಿಗೆ ಎಲ್ಲ ವಿಪರೀತ ಕಂಡಿತು. ಈ ನಯ–ವಿನಯ ದೂಮನಿಗೆ ಹೊಸದು. ಧನಿಯರ ಹುಂಕೃತಿಗಳ ಅರ್ಥಮಾಡಿಕೊಂಡೇ ಆತ ಕೆಲಸ ಮಾಡಬೇಕಾಗಿತ್ತು ಹಿಂದೆ. ಬಾಯಾರಿಕೆ ಆದರೆ "ಉಪ್ಪೂರು ಬೆಲ್ಲಕ್ಕಿಂತ ಮೇಲುಂಟಾ?" ಎಂದು ಹೇಳಿ ಧನಿಯರು ನೀರು–ಬೆಲ್ಲದ ಮಹಿಮೆಯನ್ನು ಹೊಗಳುವರು. ಅಂದು ಅಮಾವಾಸ್ಯೆಯಾದರೂ ಎಲ್ಲಿ ಚಂದ್ರ ಮೂಡಿ ಬಿಡು ತ್ತಾನೋಂತ ದೂಮ ಬೆದರಿದ.

ಧನಿಗಳ ಅಪೂರ್ವ ವಿನಯಕ್ಕೆ ಕಾರಣ ಇತ್ತು. ಉಪ್ಪರಿಗೆ ಮನೆ ಕಟ್ಟಿ ಸುವುದಕ್ಕೆ ಹಿಡಿದಿದ್ದರು. ಉಡುಪಿಯಲ್ಲಿ ಸಿಮೆಂಟು ಹೇಳಿ ಬಂದಿದ್ದರು. ಆದರೆ ಅದು ನಿಶಾಚರ ಸಿಮೆಂಟು; ಬಿಸಿಲು ಬಿದ್ದರೆ ಕೆಡುವ ಜಾತಿದ್ದು. ಎಷ್ಟೋ ಜನರ ಹತ್ತಿರ ಹೇಳಿ ನೋಡಿದರು. ಯಾರೂ ತಮ್ಮ ದೋಣಿಯಲ್ಲಿ ಹಾಕಿಕೊಂಡು ಬರುವುದಕ್ಕೆ ಕಬೂಲು ಮಾಡಲಿಲ್ಲ. ಯಾತಕ್ಕೆಂದರೆ ಕಥೆ ಹೀಗೆ. ಧನಿಯರ ಇನ್ನೊಂದು ಪಾಲಿನ ಇನ್ನೊಬ್ಬರು ವರ್ಗದಾರರಿದ್ದರು. ಅವರಿಗೂ ಇವರಿಗೂ ಎಣ್ಣೆಸೀಗೆಯ ನಂಟು. ಸಿಮೆಂಟನ್ನೆಲ್ಲಾದರೂ ಅವರು ನೋಡಿದರೋ ಮರುದಿವಸ ಸ್ವತಃ ಹೋಗಿ ಉಡುಪಿಯ ತಹಶೀಲ್ದಾರರನ್ನು

ಕಂಡು ದೂರು ಹೇಳುವುದು ಅವರ ಸ್ವಭಾವ. ತೆಂಗಿನ ಮರಕ್ಕೊಂದರಂತೆ ಅವರ ಜನ ಉಪ್ಪೂರು ಕುದುರಿನಲ್ಲೆಲ್ಲಿಯೂ— ಈ ಧನಿಯರ ಚಲನವಲನಗಳ ನ್ನರಿಯಲಿಕ್ಕೆ ನೇಮಿಸಿದ್ದರು. ಅಲ್ಲದೆ ಧನಿಯರಿಗೆ ಇತ್ತಿತ್ತ ದುಡ್ಡಿನ ಬಲ ಕಡಮೆ ಆಗುತ್ತಾ ಬರುತ್ತಿತ್ತು. ಆದ್ದರಿಂದ ಅವರ ಕಡೆಯ ಜನರೆಲ್ಲ ಒಬ್ಬೊಬ್ಬ ರಾಗಿ ಅವರು ವಿರೋಧಿಯ ಪಾರ್ಟಿಗೆ ಸೇರುತ್ತಿದ್ದರು. ಯಾರನ್ನು ನಂಬು ವಂತಿರಲಿಲ್ಲ. ಯೋಚಿಸಿ ಯೋಚಿಸಿ ಕೊನೆಗೆ 'ದೂಮನೆ ಈ ಕೆಲಸಕ್ಕೆ ತಕ್ಕ ಆಳು' ಎಂಬ ಸಿದ್ಧಾಂತಕ್ಕೆ ಬಂದಿದ್ದರವರು.

ದೂಮನಿಗೆ ಸಂಗತಿ ಎಲ್ಲಾ ತಿಳಿಸಿದರು. ದೂಮ ಸೈಗುಟ್ಟಿದ. ಧನಿ ಅಂತಹ ಕೆಟ್ಟ ಜನ ಏನೂ ಅಲ್ಲ. ಆ ಕಾಲದಲ್ಲಿ ಆವನ ಪಾಲಿಗೆ ಅವರು ಕರ್ಣನೇ ಆಗಿದ್ದರು. ಅವರಿಗಾಗದಿದ್ದ ಪಡಾವು ಜೋಡಿ ದೂಮನಿಗೆ, ತುಸು ಹರಿದ ಅಂಗಿ–ದೋತ್ರ ಅದೂ ದೂಮನಿಗೆ. ತಾವು ಬೀಡಿ ಎಳೆಯು ವಾಗ ಮನಸ್ಸಾದರೆ ಒಂದೊಂದು ಬೀಡಿ ದೂಮನಿಗೂ ಕೊಟ್ಟುಬಿಡುತ್ತಿದ್ದರು. ಈ ಸವಿ ನೆನಹುಗಳೆಲ್ಲ ದೂಮನಿಗೆ ಈಗ ಮರುಕಳಿಸಿದವು. ಅವರೆಂದ ಮಾತಿಗೆ ಸೈಗುಟ್ಟಿದ. ರಾತ್ರಿ ಮೂರು ಗಂಟೆಯೊಳಗೆ–ತಪ್ಪಿದರೆ ಮುಂಜಾನೆ ನಸುಕಿಗೆ – ಸಿಮೆಂಟು ಸಮೇತನಾಗಿ ಹಾಜರಿರುವೆನೆಂದು ಭರವಸೆ ಕೊಟ್ಟ. ಧನಿಯರ ಮುಖ ಅರಳಿತು: 'ಇದ್ದರೆ ಇರಬೇಕು ನಿನ್ನಂಥ ಬಂಟ' ಎಂದರು. ಒಳಗಿಂದ ಒಬ್ಬ ಚಿಕ್ಕ ಹುಡುಗ 'ರಾಮನ ಬಂಟಾ ಹನುಮಂತಾ' ಎಂದು ವಿಚಿತ್ರವಾಗಿ ಹಾಡುತ್ತಾ ಬಂದ. ಧನಿಯರು ಗಟ್ಟಿಯಾಗಿ ನಕ್ಕುಬಿಟ್ಟರು.

ದೂಮ ದೋಣಿ ಸಲ್ಲಿಸಿದ ಜಾಗಕ್ಕೆ ಬಂದ. ದೋಣಿ ಬಿಚ್ಚಿದ.

"ಹೋ ಯಾರಲ್ಲಿ? ಯಾರದು?" ಎಂದು ಹತ್ತು ಮಾರು ದೂರದಲ್ಲಿ ಎರಡು ಕುತ್ತಿಗೆಗಳಿಂದ ಭಿನ್ನಭಿನ್ನವಾಗಿ ಧ್ವನಿ ಹೊರಟಿತು.

"ನಾನು ದೂಮ ಪೂಜಾರಿ" ಎಂದ ದೂಮ.

"ದೂಮನಾ? ಇದೊಂದು ಕಟ್ಟು ಕಲ್ಯಾಣಪುರದ ಕಿಲಮಂತನ ಅಂಗಡಿ ಯಲ್ಲಿ ಕೊಡು" ಎಂದವು ಕಂಠಗಳು.

ಕಂಠದಿಂದಲೇ ದೂಮಪೂಜಾರಿಗೆ ವ್ಯಕ್ತಿ ಪರಿಚಯವಾಯಿತು. ಪೇದ್ರು ಸೋಜ ಮತ್ತು ಫೆರ್ನಾಂದಿಸರು. ದೂಮ ಒಂದು ಸಲ ಜಲ್ಲ ಒತ್ತಿ ಬಿಟ್ಟಿದ್ದ. ಹಿಂದೆ ತಂದ ದೋಣಿಯನ್ನು ಪೇದ್ರು ಸೋಜ ನೀರಿಗಿಳಿದು ಮಡಲಿನಲ್ಲಿ ಕಟ್ಟಿದ ಆ ಗಂಟನ್ನು ತೆಗೆದುಕೊಂಡ. ಸುವಾಸನೆ ಬರುತಿತ್ತು. ಗಂಟಿನೊಳಗಿನ

ಸಾಮಗ್ರಿ ಯಾವುದೆಂದು ಪೇದ್ರು ಸೋಜ ಹೇಳಬೇಕಾಗಿರಲಿಲ್ಲ. ದೂಮನ ಮೂಗೇ ಹೇಳಿತು.

ದೂಮ ದಂಡೆ ಬಿಟ್ಟು ದೂರಾದ! 'ಜಾಗ್ರತೆ, ದೂಮಾ' ಎನ್ನುವ ಶಬ್ದ ಕೇಳಿಸಿದಂತಾಯಿತು.

ದೂಮ ನಾಲ್ಕು ಸಲ ಜಲ್ಲ ಒತ್ತಿದ. ಐದನೆಯದು ನೆಲಕ್ಕೆ ತಾಕಲಿಲ್ಲ. ಆರನೆಯದರ ಸರದಿ ಬರುವಾಗ ದೂಮ ಗಂಟು ಬಿಚ್ಚಿ ಆಗಿತ್ತು. ಹೌದು ಹತ್ತು ಬಾಟ್ಲಿ ಇತ್ತು. ನಕ್ಷತ್ರಗಳ ಬೆಳಕಿನಲ್ಲಿ ಬಣ್ಣ ಬಿಳಿ ಎಂಬುದನ್ನು ಕಂಡ. ಈಗ ತೀರ ಥರ್ಡ್ ಕ್ಲಾಸ್ ಕಳ್ಳಿಗೆನೇ ಸರಾಯಿಯ ಬೆಲೆ ಆಗಿತ್ತೆಂಬುದು ಗೊತ್ತು ದೂಮನಿಗೆ. ಪ್ರೊಹಿಬಿಶನ್ ಬಂದು ಈ ಮೂರು ತಿಂಗಳಲ್ಲಿ ತನ್ನ ಮನೆಯ ಪರಿಸ್ಥಿತಿ ಎಷ್ಟೋ ಸುಧಾರಿಸಿದ್ದನ್ನು ದೂಮ ಯೋಚಿಸಿದ. ಪೇದ್ರು ಸೋಜನ ಮೇಲೆ ಸಿಟ್ಟು ಬಂತು ಮನೆ ಹಾಳು ಮಾಡುವವ ಎಂದು ಮನಸ್ಸಿನಲ್ಲೇ ಶಪಿಸಿದ. 'ಘನಾರ್ಂದಿಸಸಿಗೆ ಬೇಡಾದ ಕಸಬು ಇದು' ಎಂದ. ಪೇದ್ರು ಸೋಜ ಗಟ್ಟಿ ಕುಳವಾರು. ಪೋಲೀಸರ ಕೈಗೆ ಬಿದ್ದರೂ ತಪ್ಪಿಸಿ ಕೊಂಡಾನು. ಈ ಪಶುವಿಗೆ ಯಾಕೆ ಬೇಕು ಆ ಕುತಂತ್ರಿಯ ಒಡನಾಟ? ಎಂದು ಕನಿಕರಿಸಿದ ಆದರೆ ಬಾಟ್ಲಿ ನೋಡಿ ಸಿಟ್ಟು ಹೆಚ್ಚಿತು. ಒಂದೊಂದಾಗಿ ತೆಗೆದೆಸೆದ. ಒಂದು, ಎರಡು . . . . ಒಂಭತ್ತು. ಒಂಭತ್ತನೆಯದನ್ನೆಸೆಯು ವಾಗ ದೂಮನಿಗೆ ಏನೋ ನೆನಪಾಯಿತು. ಹೊಟ್ಟೆಯಲ್ಲಿ ತಳಮಳ ಹುಟ್ಟಿತು. 'ಎಸೆಯಬೇಕೇ ಇದನ್ನು?' ಎಂದು ಸವಾಲು ಹುಟ್ಟಿತು ಮನಸ್ಸಿನಲ್ಲಿ. ಒಂದೆರಡು ಕ್ಷಣ ದಿಟ್ಟಿಸಿ ನೋಡಿದ ಬಾಟ್ಲಿಯನ್ನು, ಫಕ್ಕನೆ ತೆಗೆದೆಸೆದುಬಿಟ್ಟ ದೂರ—ಬಲು ದೂರ ನೀರಿನಲ್ಲಿ ಬಿತ್ತದು. ಹತ್ತನೆಯದನ್ನು ಕೈಗೆ ತೆಗೆದುಕೊಂಡ. ಅದನ್ನೂ ಎತ್ತಿಹಿಡಿದ. ಸಾಧ್ಯವಿಲ್ಲ. ಒಂಭತ್ತನೆಯದನ್ನು ವಿಮರ್ಶಿಸುವ ಹೊತ್ತು ಬೂಚಿ ಕೆಳಗೆ ಬಿದ್ದು ತುಸು ಚೆಲ್ಲಿತ್ತು. ಅದರ ಘಮಘಮಿಸುವ ಸುವಾಸನೆ ದೂಮನ ತಲೆಯನ್ನು ತಿರುಗಿಸಿತು. ಉಪ್ಪು ಹುಳಿ ತಿನ್ನುವ ಮನುಷ್ಯ ಜಾತಿ ತಾನೇ ಅವನದು? ಮತ್ತೇನು? ಹತ್ತನೆಯದು ನೀರು ಸೇರಲಿಲ್ಲ. ಬದಲು ದೂಮನ ಗಂಟಲನ್ನು ಹೊಕ್ಕು ತನ್ನ ಪೂರ್ವ ಪರಿಚಯದ ಜಠರ ಕೋಶಕ್ಕಿಳಿಯಿತು—ಪೂರಾ ಒಂದು ಬಾಟ್ಲಿ. ಬಾಟ್ಲಿ ಮುಗಿಸಿದ ಮೇಲೆ ತಲೆಕೆಳಗಾಗಿ ಹಿಡಿದು ಒಂದೊಂದಾಗಿ ತೊಟ್ಟಿಕ್ಕುವುದಕ್ಕೆ ಬಾಯಿಕೊಟ್ಟ. ಆ ಮೇಲೆ ಬಾಟ್ಲಿಯ ಬಾಯಿಯನ್ನು ನೆಕ್ಕಿದ.

ಬಾಟ್ಲಿ ತಾನಾಗಿ ಕೆಳಗೆ ಬಿತ್ತು ದೋಣಿಯಲ್ಲಿ. ದೂಮನ ಮನಸ್ಸು ಹೂವಿನಷ್ಟು ಹಗುರವಾಯಿತು. ಅಮಾವಾಸ್ಯೆಯ ರಾತ್ರಿಯಾದರೂ ತಿಂಗಳನನ್ನು ಕಂಡನವ ಆಗಸದಲ್ಲಿ. ಆದರೆ ಸಾವಿರಾರು – ಲಕ್ಷಾಂತರ ಚಂದ್ರರನ್ನು ಆತ ಕಾಣುವುದು ಇದೇ ಮೊದಲು. ಹಿಂದಿನ ದಿನ ಒಂದು ಆಟಕ್ಕೆ ಹೋಗಿದ್ದ. ಹನುಮನಾಯ್ಕನ ವೇಷದ ನೆನಪಾಗಿ ಕೆ ಕ್ಕೆ ಕ್ಕೇ ಎಂದು ನಕ್ಕ. ದೋಣಿಯ ಬಾಸೆಗೆ ಬೆರಳಿಂದ ಬಡಿದು ಮದ್ದಳೆಯನ್ನು ಜ್ಞಾಪಕಕ್ಕೆ ತಂದುಕೊಂಡ. 'ಗಜವದನಗೆ . . . ಗಣಪಗೇ . . . ಹಾಡಿದ. ಕುಣಿಯಲೆಂದು ಮೇಲಕ್ಕೆದ್ದ. ಮಸಕುಮಸಕಾಗಿ ನೀರಿನಲ್ಲಿ ನೆರಳು ಬಿದ್ದುದನ್ನು ಕಂಡು 'ಹೋ ಯಾರೋ ಇದ್ದಾರೆ' ಎಂದು ಮರಳಿ ಕೂತ ಆ ಕಾಲ್ಪನಿಕ ವ್ಯಕ್ತಿಯ ಹತ್ತಿರ 'ಬಂದಿದ್ದ್ಯಾ ನಿನ್ನೆ ಆಟಕ್ಕೆ?' ಎಂದು ಸಲ್ಲಾಪಕ್ಕಾರಂಭಿಸಿದ. 'ಎಲ್ಲಿ, ಉಪ್ಪೂರಿಗಾ ಹೋಗಬೇಕು? ಬನ್ನಿ ದೋಣಿ ಹತ್ತೀರಿ' ಎಂದ. ಜಲ್ಲ ಹಿಡಿದು ಪಡುಕುದುರಿನವರೆಗೆ ಒಂದೇ ಸಮನೆ ದೋಣಿ ಒತ್ತಿದ. ಕಲ್ಯಾಣಪುರ ಕಡವು ಎಲ್ಲೋ ಏನೋ? ಅಮೃತಪಾನದ ಉತ್ಸಾಹದಲ್ಲಿ ಸಿಮೆಂಟಿನ ಯೋಚನೆ ಅದೃಶ್ಯವಾಯಿತು. ಮತ್ತೂ ಹಿಂದೆ ಬಂದ. ಉಪ್ಪೂರು ಕಡವಿಗೆ ಬಂದಾಗ ಮೂರು ಗಂಟೆ ಹೊತ್ತಾಗಿತ್ತು. ಏಳೆಂಟು ಮೈಲಿ ಏಕಪ್ರಕಾರ ದೇಹದಂಡಿಸಿದ್ದರಿಂದ ಅಮಲಿಳಿದು ತಿಳಿವು ಮೂಡುವುದರಲ್ಲಿತ್ತು. ಏನೋ ಮರೆತವನಂತೆ ದೋಣಿ ನಿಲ್ಲಿಸಿದ. ಮುಂದೆ ಕಾಲು ಹಾಕಿದ; ಒಂದು ಕಲ್ಲಿತ್ತು; ಎಡವಿ ಬಿದ್ದ. ಬಿದ್ದವನಿಗೆ ಚೆನ್ನಾಗಿ ನಿದ್ದೆ ಬಂತು.

ಬೆಳಗಿನ ತಂಗಾಳಿಗೆ ಎಚ್ಚರಾಯಿತು. ಧನಿಯರು ಹೇಳಿದ್ದೆಲ್ಲ ನೆನಪಿಗೆ ಬಂತು. ತಾನು ಮಾಡಿದ ಕೆಲಸ ಒಂದೂ ಬಿಡದೆ ಮರಳಿ ಸ್ಮೃತಿಪಥದಲ್ಲಿ ಹಾದು ಹೋಯಿತು. "ಅಯ್ಯೋ, ಚಿನ್ನದಂಥ ಒಡೆಯನಿಗೆ ಮೋಸಮಾಡಿದೆನಲ್ಲಾ?" ಅನ್ನಿಸಿತು. ಆದರೆ ಮುಖ ತೋರಿಸುವಂತಿಲ್ಲ. ಪೇದ್ರು ಸೋಜನಿಗಾದರೆ ದೋಣಿ ಕವುಚಿ ಬಿತ್ತೆಂದು ನೆವ ಹೇಳಬಹುದು. ಆ ಕಳ್ಳನಿಗೆ ಸುಳ್ಳು ಹೇಳಿದರೆ ಪಾಪ ಬರುವ ಹಾಗಿಲ್ಲ.

'ಆದರೆ ಧನಿಯರಿಗೆ . . . ಊಂ ಹೂಂ . . . ಇದ್ದದ್ದನ್ನು ಇದ್ದ ಹಾಗೆ ಹೇಳಿದರೆ ಮಾನಗೇಡಿತನವೇ ಸರಿ. ಅವರ ಕಣ್ಣು ತಪ್ಪಿಸಿ ಬದುಕುವುದೊಂದೇ ದಾರಿ' ಎಂದುಕೊಂಡ. ಬೇಗಬೇಗನೆ ಎದ್ದು ಮಣ್ಣು ಜಾಡಿಸಿಕೊಂಡು ಜಲ್ಲ ಹಿಡಿದ. ಕಳೆದ ರಾತ್ರಿಯ ಖಾಲಿ ಬಾಟ್ಲಿ ಕಂಡಿತು. ತಟಕ್ಕನೆ ತೆಗೆದು ನೀರಿಗೆ

ಬಿಸಾಡಿದ. ನಿಧಾನವಾಗಿ ಯೋಚಿಸುತ್ತಾ ಬೆಳ್ಳಂಬೆಳಗಾಗುವುದರೊಳಗೆ ಮನೆ ಸೇರಿದ.

'ತಪ್ಪು ಮಾಡಿದ, ಮೋಸ ಮಾಡಿದ' ಎಂದು ಅವನ ಮನಸ್ಸು ಪದೇ ಪದೇ ನುಡಿಯುತ್ತಿತ್ತು.

ಒಂದು ದಿನ ರಾಮು ಕಡವಿನ ಸ್ಕ್ಯಾಬರ ಹತ್ತಿರ ಮಾತಾಡುತ್ತಿದ್ದಾಗ ದೂರದಲ್ಲಿ ಧನಿಯರ ಮುಂಡಾಸನ್ನು ಕಂಡ. ಕಂಡವನೆ ಒಂದು ಜಿಗಿತಕ್ಕೆ ಅಲ್ಲೇ ನಿಂತಿದ್ದ ಕಾರೊಂದರ ಮರೆಯಲ್ಲಿ ನಿಂತ. ಧನಿಯರು ದೋಣಿಯಿಂದ ಇಳಿದು, ನೇರ ಕಾರಿದ್ದಲ್ಲಿಗೇ ಬರಬೇಕೆ? ಅಲ್ಲ ಅಲ್ಲ. ಅವರಿಗೂ ಕಡವಿನ ಸ್ಕ್ಯಾಬರ ಹತ್ತಿರ ಎರಡು ಮಾತಾಡಬೇಕಿತ್ತು. ಮಾತು ಮುಗಿಸಿ ಬಸ್ಸು ಹತ್ತಿ, ಬಸ್ಸಿನ ಧೂಳು ಗಗನಗಾಮಿಯಾದ ಮೇಲೆಯೇ ಕಾರಿನ ಅಡ್ಡದಿಂದ ಹೊರ ಬಂದ ರಾಮು – ಮೈ ಎಲ್ಲ ಬೆವರಿಳಿಸಿಕೊಂಡು!

— ತಮಾಮ್ ಶುದ್ —

---

ಜಲ್ಲ:– ದೋಣಿ ನಡೆಸುವ ಉದ್ದವಾದ ಸೀಮೆ ಬಿದಿರಿನ ಕೋಲು.

ಜಂಗಲ್: ಎರಡೋ ನಾಲ್ಕೋ ದೋಣಿಗಳನ್ನು ಅಡಿಗಿರಿಸಿ, ಕಾರು ದಾಟಿಸುವುದಕ್ಕಾಗಿ ಮಾಡಿದ ವ್ಯವಸ್ಥೆ.



# ಗೌರಿ

ಚಿದಂಬರ ದೀಕ್ಷಿತ

## ೧

ಧಾರವಾಡ

ಒಲುಮೆಯ ಲಲಿತಾ, ೨೦–೫–೬೭.

ಇಂದು ಮುಂಜಾನೆ ನಿನ್ನ ಓಲೆ ಕೈಸೇರಿತು. ನನ್ನ ಯಶ ಕುರಿತು ಕಳುಹಿದ ಅಭಿನಂದನೆಗೆ ನಾನು ಋಣಿ. ನಿನ್ನ ಎದರು ನನ್ನ ಬಾಳಿನ ಹಂದರವನ್ನೇ ಹಂಚಿಕಲೆಂದು ಹಂಬಲಿಸಿದ್ದೆ. ಆದರೇನು? ನನ್ನ ನಿನ್ನ ಅಂತರ ಇನ್ನೂರು ಮೈಲುಗಳಿಗೂ ಮಿಕ್ಕಬಹುದು. ಅಂತೆಯೆ, ಈ ಓಲೆಯೊಡನೆ ಅದರ ಕೆಲ ಅಂಶಗಳನ್ನು ಅರುಹುವ ಹವ್ಯಾಸ.

ತೊಡಕಿನ ಸಿಲುಬೆಯನ್ನು ಹೆಣೆದ ಕಳೆದ ಕಾಲವನ್ನು ಮರೆಯುವುದು ಅಸಾಧ್ಯವೇ! ತಂದೆಗೆ ಕಣ್ಣು ಹೋಗಿ ೨೫ ವರ್ಷಗಳಾದುವು. ಅಂದಿನಿಂದಲೂ ಅವನ ದುಡಿಮೆಗೆ ಸೊನ್ನೆ. ತಾಯಿಯೇ ಹಂಜಿ ನೂತು ನೂಲುಮಾರಿ ಜೀವನವನ್ನು ಸಾಗಿಸತೊಡಗಿದಳು. ಅವಳೂ ಈಗ ಮುಪ್ಪಿಗೆ ಬಂದಿದ್ದಾಳೆ. ಮೇಲಾಗಿ, ನೂರೆಂಟು ಚಿಂತೆ ಅವಳಿಗೆ. ನೆರೆಕೆರೆಯವರೆಲ್ಲಾ, "ಏನ್ರೀ ಇದು? ....ಮಗಳ ಮದುವೆಯಿಲ್ಲ .... ಇಪ್ಪತ್ತು ವರ್ಷ ಪ್ರಾಯ .... ಗೌರಿಯನ್ನೇನು ಮುಂದೆ ....?" ಎಂದು ಗುಸುಪಿಸಿ ಮಾಡುತ್ತಾರೆ. ಹಗಲಿರುಳೆಲ್ಲ ಕಣ್ಣು ತಪ್ಪಿಸಿ ತಾಯಿಯು ಕಣ್ಣೀರಿಡುವಳು. ಉಸಿರ್ಗರೆಯುವಳು.

ತಂದೆಗೆ ಆ ಚಿಂತೆಯಿಲ್ಲ. ಅವನು ಹೊರ ವ್ಯವಹಾರದಲ್ಲಿ ಕೈಹಾಕುತ್ತಿಲ್ಲ. ಮೂಲೆಯಲ್ಲಿ ಕುಳಿತು, "ಶಿವ ಶಿವಾ; ರಾಮ ರಾಮಾ!" ಎಂದರೆ ತೀರಿತು. ತುಸು ಕೆಲಸಕ್ಕೂ 'ಗೌರಕ್ಕ' ಎನ್ನುತ್ತಾನೆ. ನಾನು ಮನೆಯಲ್ಲಿರದಾಗಲೂ ಇದೇ ಕರೆ. ಅದು ನನ್ನ ಕುರಿತೂ ಅಲ್ಲ; ಪರ್ಯಾಯದಿಂದ ತಾಯಿಯನ್ನು ಕರೆದಂತೆಯೆ. ಅವಳು ಬಂದು ಅವನ ಸೇವೆ ಮಾಡಬೇಕು.

ಅವನಿಗೆ ನೆರೆಹೊರೆಯ ಬಳಕೆ ತೀರ ಕಡಿಮೆ. ತಾಯಿಯು ನನ್ನ ಬಗೆಗೆ ಮಾತೆತ್ತಿದಾಗಲೆಲ್ಲ, "ಅವರ ಗಂಟೇನು ಹೋದೀತು. ತಮ್ಮ ಮಕ್ಕಳು ಕಲಿಯಲಿಲ್ಲವೆಂದು ಅಸೂಯೆ, ಅವರಿಗೆ. ನಾಳೆ ಗೌರಿಯು ಪರೀಕ್ಷೆ ಪಾಸಾಗಿ ಗಳಿಸತೊಡಗಿದರೆ, ಅವರೆಲ್ಲಾ—ಕೇರಿಯ ಗಂಡಸರೂ ಲಜ್ಜೆಪಡಬೇಕು." ಎನ್ನುವ.

ತಾಯಿಗೆ ಇಲ್ಲಿಂದ ಬೇರೊಂದು ನೋವಿಗೆ ಮೊದಲಾಗುವುದು. ಮುಂದಣ ಜೀವನ ಸಮಸ್ಯೆಯೊಂದು ತಲೆಭಾರವೆನಿಸುವುದು. ಸಮಾಜ, ರೂಢಿಗಳನ್ನು ಮರೆಯುತ್ತಾಳೆ. ಹೊಟ್ಟೆಯ ಪಾಡು ಎದುರು ಕುಣಿಯುವುದು.

"ಗೌರಿಗೇಕೆ ಮದುವೆ? ಗೌರಿಯು ಹೆಣ್ಣಲ್ಲ; ಗಂಡು. ಅವಳೇ ನಮ್ಮ ಮುಂದಿನ ಜೀವಿಕೆಗಾಗಿ ಹೊರೆಯುವವಳು!" ಎಂದು ಮನದೊಳಗೆ ಸಿಶ್ಚಯಿಸುವಳಾಕೆ.

ಈ ಯಾವ ಗೊಂದಲವನ್ನೂ ಹಿರಿಯರು ನನ್ನ ಮುಂದೆ ಎತ್ತುವದಿಲ್ಲ. ತಮ್ಮ ಇಲ್ಲದ ಪರಟೆ ಗೌರಿಗೆ ನೋವು. ಅಭ್ಯಾಸಕ್ಕೆ ತೊಡಕು. ತಾವೇನೂ ಹಣವ್ಯಯ ಮಾಡಬೇಕಾಗಿಲ್ಲ. ಶಿಷ್ಯವೃತ್ತಿಯಿದೆ - ಎಂದು ಅವರ ದೃಢ ವಿಚಾರ.

ಅಕ್ಕಾ, ನಾನು ದುರ್ದೈವಿ. ನನಗೆ ನಾಲ್ವರು ಅಣ್ಣಂದಿರಂತೆ. ಅವರಲ್ಲಿ ಒಬ್ಬನಾದರೂ ಬದುಕಿದ್ದರೆ . . . . .

ಇದೆಲ್ಲ, 'ರೀ' ರಾಜ್ಯದ ಮಾತು, ಲಲಿತಾ. ತಂದೆತಾಯಿಯರು ನನ್ನನ್ನು ಗಂಡುಗುವರಿಯಂತೆ ಬೆಳೆಯಿಸಿದ್ದಾರೆ. ಶಿಕ್ಷಣ ಕೊಡಿಸಿದ್ದಾರೆ. ನಾನು ನಿಜಕ್ಕೂ ಗಂಡುಸಾಗಬೇಕು. ಮುಪ್ಪಿನ ತಂದೆತಾಯಿಯರ ಜೀವನವನ್ನು ಸುಗಮವಾಗಿ ಮಾಡಬೇಕು. ಅದೇ ಗುರಿ, ಅದೇ ಹಂಬಲು ನನ್ನನ್ನು ಇಲ್ಲಿನ ವರೆಗೆ ಮುಂದುವರೆಸುತ್ತ ಬಂದಿದೆ ಪುಣ್ಯದಿಂದ ಪರೀಕ್ಷೆಯ ಪರಿಣಾಮವೂ ಉತ್ತಮವಾಗಿದೆ. ಇಲ್ಲಿಗೆ ನನ್ನ ಶಿಕ್ಷಣದ ತೇರಿನ ಗಡಿಯೂ ತಲುಪಿದಂತೆಯೆ. ಹೆಚ್ಚು ಕಲಿಯುವ ಮನಸ್ಸಿಲ್ಲ. ಅನುಕೂಲವೂ ಇಲ್ಲ. ಶಿಕ್ಷಕಿಯ ಸ್ಥಳಕ್ಕಾಗಿ ಅರ್ಜಿ ಕಳುಹಿಸಿದ್ದೇನೆ. ನೋಡಬೇಕು.

ಮರುವೋಲೆ ಬೇಗ ಬರೆಯುವೆಯಾ?

ನಿನ್ನ
**ಗೌರಿ**

೨

ಸಂಗವಳ್ಳಿ
೧-೬-೪೬.

ತಂಗಿ ಕುಸುಮಳಿಗೆ, ಒಲವಿನ ಹರಕೆಗಳು.

ಇಂದು ಅಕ್ಷಯತೃತೀಯೆ. ಈ ಶುಭ ದಿನದಲ್ಲಿ ನಿನಗೊಂದು ಕಾಣಿಕೆ. ಅದೇನು ಬೆಲೆ ಕೊಟ್ಟು ಕೊಂಡುದಲ್ಲ. ಕೊಡುವ ಬದುಕೂ ಅಲ್ಲ. ಕೇವಲ ಆನಂದದ ಸಂಗತಿ. ಅಣ್ಣನು ಇಲ್ಲಿಗೆ ಮೊನ್ನೆ ಬಂದಿದ್ದ. ಅವನೇ ಇದನ್ನೆಲ್ಲ ಹೇಳಿದ.

ನಾವು ನಾಲ್ಕನೆಯ ಇಯತ್ತೆಯಲ್ಲಿ ಓದುತ್ತಿದ್ದಾಗ ತೋಟದ ಊಟಕ್ಕೆ ಹೋಗಿದ್ದೆವಲ್ಲ . . . . ನೀನು ಹಟದಿಂದ ಬಂದುದನ್ನು ಮರೆತಿಲ್ಲವಷ್ಟೆ? ಆ ನೆಲ್ಲಿಯ ಗಿಡ, ಗೊಂಚಲು ಗೊಂಚಲು ಕಾಯಿಗಳು . . . . ತೋಟಿಗನನ್ನು ಲೆಕ್ಕಿಸದೆಯೇ ಕಲ್ಲುಗಳನ್ನು ಬೀರಿಯೇ ಬೀರಿದ್ದು . . .

ನೀನು ಬೀರಿದ ಸಣ್ಣ ಕಲ್ಲೊಂದು ಗೌರಿಯ ಹಣೆಗೆ ಬಡಿದು ಮೋರೆ ರಕ್ತಮಯವಾಯಿತು. ನಾನು ನಿನ್ನನ್ನು ಥಳಿಸಲೆಂದು ಎದ್ದೆ. ಗೌರಿಯು ನೋವನ್ನು ನುಂಗಿ ಅಳುವ ನಿನ್ನನ್ನೇ ಸಂತವಿಸಿದಳು . . . .

ಸರಿ . . . ಅದೇ ಸೌಜನ್ಯದ ಮೂರ್ತಿಯಾದ ಗೌರಿ ಇಂದು ಇಂಟರಿನಲ್ಲಿ ತೇರ್ಗಡೆ ಹೊಂದಿ ಧಾರವಾಡದಲ್ಲಿಯೇ ಸರಕಾರದ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾಳೆ. ಮುಪ್ಪಿನ ಅವಳ ಹಿರಿಯರ ಉಪಜೀವನದ ಭಾರ ಅವಳ ಮೇಲೆಯೆ. ಅವಳಿಗೆ ಆ ಕೆಚ್ಚೂ ಇದೆ.

ಇದೂ ಒಂದು ಆದರ್ಶವಷ್ಟೆ?

ನಿನ್ನ ಹೊಸ ಸಂಸಾರದ ಅನುಭವವೇನೆನ್ನುತ್ತಿದೆ – ತಿಳಿಸು.

ನಿನ್ನ ಅಕ್ಕ
**ಸುಶೀಲಾ.**

೩

ಮುಂಬಯಿ,
ಸುಶೀಲಾದೇವಿ, ೧-೧೧-೪೬.

ನಿಮಗೇನು? 'ದೇವಿ'ಯೆಂದರೂ ಸರಿ . . . ಬಾಯೀಸಾಹೇಬರೋ . . . ಮತ್ತೇನೊ – ಅಂದರೂ ಅಷ್ಟೆ. ಪತ್ರ ಬರೆಯುವ ರೂಢಿಯೇ ಮರೆತಿದೆ.

ಇಬ್ಬರೂ ಸೋದರಿಯರು ದೀವಳಿಗೆಯನ್ನು ಅಣ್ಣನ ಮನೆಯಲ್ಲಿಯೇ ಹೊಡೆಯುತ್ತಿದ್ದೀರಂತೆ . . . ಪತಿರಾಯರು ಸಂಗಡವೇ, ಅಷ್ಟೆ?

ನೀವು ಧಾರವಾಡಿಗೆ ಹೋಗಿ ಒಂದು ತಿಂಗಳಾಯಿತೆಂದು ಕೇಳಿದೆ. ಗೌರಿಯನ್ನು ಕಂಡಿದ್ದೀಯಷ?

ಛೀ! ದೊಡ್ಡ ಹುಡುಗಿಯಾಕೆ. ಈಗ ನಿಮ್ಮಣ್ಣನೊಂದಿಗೆ ಮಾತನಾಡಲಿಕ್ಕೂ ಇಲ್ಲ.

ಕೆಲಸವೇನೋ ಆಯಿತು. ಎಷ್ಟು ದಿನ ಮದುವೆಯಾಗದೆ ಇರುವುದು ಸಾಧ್ಯ? ಅವಳಿಗೂ ಹೆಣ್ಣಿನ ಬಯಕೆಗಳು ಇರಬಹುದಲ್ಲ? ಒಳ್ಳೆಯ ವರನೊಂದಿಗೆ ಮದುವೆಯೊಂದಾದರೆ, ಅವಳಿಗೂ, ಅವಳ ತಂದೆತಾಯಿಯರಿಗೂ ಚೆನ್ನು. ನೆರೆಹೊರೆಯಲ್ಲಿಯೂ ಸಮ್ಮತಿಯಾಗಿ ಇರಬಹುದು. ವಿಚಾರ ತೆಗೆದು ನೋಡು.

ಫೋಟೋ ಕಳುಹುವೆ ಏನನ್ನುತ್ತಾಳೆ?

ಇನ್ನೆರಡು ತಿಂಗಳಿಗೆ ನೀನು ತಾಯಿಯಷ್ಟೆ?

ಹೂಂ . . . ಗಂಡು! ಇಲ್ಲವೆ . . . ಗೌರಿಯಂಥ . . .

ರಾಮಣ್ಣನಿಗೆ ನಮಸ್ಕಾರ ತಿಳಿಸು. ಇಕೋ, ಇಂದಿನ ಹೊಸ ನಮಸ್ಕಾರ—ಜೈ ಹಿಂದ!

ನಿನ್ನ

**ಲಲಿತಾ.**

೪

ಧಾರವಾಡ

ಪ್ರಿಯ ಲಲಿತಾ, ೧೧—೧೨—೪೬.

ನಿನ್ನ ಪ್ರಶ್ನೆಗಳಿಗೆ ಉತ್ತರವನ್ನು ದೊರಕಿಸಲು ಇಷ್ಟು ಕಾಲ ಕಳೆಯಿತು. ಕ್ಷಮೆಯಿರಲಿ.

ಗೌರಿಯ ಮದುವೆಯ ಬಗೆಗೆ ವಿಚಾರವೆತ್ತಿದ್ದೀಯೆ. ಆದರೆ ಅವಳ ವಿವಾಹದ ವಿಚಾರವು ನಮ್ಮಷ್ಟು ಸುಲಭವಲ್ಲ. ಪರಿಸ್ಥಿತಿಗೆ ಅನುವು ಕೊಡದೆ ಇದ್ದರೆ ನಡೆದೀತೆ? ಅವಳ ಮದುವೆಯ ವಿಚಾರದಲ್ಲಿ ಎರಡು ತೊಡಕುಗಳು ತಲೆಯೆತ್ತುತ್ತಿವೆ.

ಅವಳು ವಿವಾಹವಾದ ಮೇಲೆ ತವರುಮನೆಯಲ್ಲಿ ಇರಲಾಗುತ್ತಿದೆಯೆ? ತಂದೆ ತಾಯಿಯರನ್ನು ಗಂಡನ ಮನೆಯಲ್ಲಿ ಇರಿಸಿಕೊಳ್ಳಲಾದೀತೆ? ಅವರು ಒಪ್ಪಬಹುದೆ? ಇಲ್ಲಿನ ವರೆಗೆ – ಕಿರಿಯದೇ ಆಗಲಿ – ತನ್ನ ಮನೆಯೆಂಬ ನೆಲಳಿನಲ್ಲಿದ್ದ ಅವಳ ತಂದೆತಾಯಿಯರು ಈಗ ಹೆರರ – ಅವಳ ತಿಳುವಳಿಕೆ ಯಂತೆ ಅಥವಾ ಭಾವನೆಯಂತೆ – ಅನ್ನಕ್ಕೆ ಬೊಗಸೆಯೊಡ್ಡಲು ಮನಸ್ಸು ಮಾಡಿಯಾರೆ?

ಈ ಸಮಸ್ಯೆಗಳು ಬಗೆಹರಿಯಬೇಕಾದಲ್ಲಿ, "ಬಂದುದು ಬರಲಿ!" ಎಂದು ತಂದೆತಾಯಿಯರು ಸಿದ್ಧರಾಗಬೇಕಷ್ಟೇ ಅಲ್ಲ, – ಗೌರಿ ದುಡಿಯುತ್ತಿದ್ದಾಗಲೇ ಇದೆಲ್ಲ ಸಾಧ್ಯವೆನಿಸುವುದು. ಆದರೆ, ಮದುವೆಯಾದ ಗಂಡನು ಹೆಂಡತಿಗೆ ಸ್ವತಂತ್ರವಾಗಿ ದುಡಿಯಲು ಅವಕಾಶ ಕೊಡುವುದು ಸಾಧ್ಯವಿದೆಯೆ? . . . ಸಾಮಾನ್ಯ ದೃಷ್ಟಿಯಿಂದ ಇದು ಒಳ್ಳೆಯದೆಂದು ಯಾರೂ ಹೇಳಲಾರರು.

ಅವಳ ಹಿರಿಯರಿಗೂ ಈ ವಿಷಯದಲ್ಲಿ ತುಂಬ ಆತುರವಿದ್ದಂತೆ ಕಾಣುತ್ತಿದೆ. ಅದು ಸಹಜ. ಈ ಮಾತೆತ್ತಿದಾಗಲೆಲ್ಲ ಗೌರಿಯು ಸಮಸ್ಯೆಯ ಕಡಲಿನಲ್ಲಿ ಈಜುತ್ತಾಳೆ. ಹೃದಯದ ವಿಕಾರಗಳನ್ನು ಸದೆಬಡೆದು ಪರಿಸ್ಥಿತಿಯ ಹದಕ್ಕೆ ಮನಸ್ಸನ್ನು ಅಣಿಗೊಳಿಸುವಳು.

"ನನಗೇನೂ ಮದುವೆಯು ಅವಶ್ಯವಿಲ್ಲ." ಎಂಬುದು ಅವಳ ನಿಶ್ಚಯದ ವಾದ. ಅವರಿಗೂ ವೇದನೆ ಗೊತ್ತಿದೆ. ಅಂತೆ, ಅವರು ಸುಮ್ಮನಾಗುವರು . . .

ನಾನು ಕೆಲ ಯೋಜನೆಗಳನ್ನು ಅವಳೆದುರು ಇರಿಸಿದೆ. ಅವಳು ಒಮ್ಮೆಲೆ ಎರಕದ ಗೊಂಬೆಯಂತೆ ಉತ್ತರವಿತ್ತಳು.

"ನಾನೇನು ಮೇಧಾವಿಯಾಗಿ ಬಾಳಲಾರೆನೆಂದು ನಿಮ್ಮ ಗ್ರಹಿಕೆಯೆ, ಸುಶೀಲಾ?" ತನ್ನ ವಿಚಾರ ಸಮರ್ಥಿಸಲು ಅನೇಕ ಹೆಂಗಳೆಯರ ಉದಾಹರಣೆ ಯಿತ್ತಳು.

"ಸರಿ! ಗೌರಿಯು ಅವರಿಗೇನೂ ಕಡಿಮೆಯಾಗಲಾರಳು." ಎಂದು ಕೊಂಡು ಮರಳಿದೆ.

ಗೌರಿಯ ಮದುವೆಯ ತೊಡಕಿನ ಹರವು ಇಷ್ಟಿದೆ. ನಿನಗೆ ಸೂಚ್ಯವಾದ ದಾರಿ ಕಂಡರೆ ತಿಳಿಸು.

ನಾಳೆ ಇಲ್ಲಿಂದ ಹೊರಡುವೆ. ನಿನ್ನ

**ಸುಶೀಲಾ.**

೫

ಧಾರವಾಡ
೨೦-೧೨-೪೬.

ತಂಗಿ ಸುಶೀಲಳಿಗೆ, ಆಶೀರ್ವಾದಗಳು.

ತಾಯಿ-ಮಗು ಆರೋಗ್ಯವಾಗಿದ್ದೀರಷ್ಟೆ? ನೀನಿನ್ನೂ ಹೊಸಬಳು. ಮಗುವಿನತ್ತ ಹೆಚ್ಚು ಲಕ್ಷ್ಯವಿರಲಿ.

ನೀನು ಆಗಾಗ ಗೌರಿಯ ವಿಷಯವನ್ನು ಕೇಳುತ್ತೀಯಷ್ಟೆ? . . . ಅವಳು ಶಾಲೆಯಲ್ಲೆಲ್ಲ ತುಂಬ ಒಳ್ಳೆಯ ಶಿಕ್ಷಕಿಯೆಂದು ಹೆಸರು ಪಡೆದಿದ್ದಾಳೆ. ಪಾಪ! ಬಡ ಹುಡುಗಿಗೆ ಕೀರ್ತಿಯೊಂದೇ ಧ್ಯೇಯ!

ವೆಂಕಣ್ಣ ಮಾಸ್ತರರನ್ನಂತೂ ಮೊದಲಿನಿಂದ ಬಲ್ಲೆಯಷ್ಟೆ? ಬುದ್ಧಿವಂತ, ಸಾಹಿತಿ; ಮೇಲಾಗಿ, ಶಾಲೆಯ ಎಲ್ಲ ಚಟುವಟಿಕೆಗಳಿಗೆ ಉಗಮಸ್ಥಾನ. ಗೌರಿಯ ಕೈ ಅವರಿಗಿಂತ ಮೇಲಾದೀತೆಂದು ಊಹೆ. ಅಂತಹ ಒಂದೆರಡು ವ್ಯಕ್ತಿಗಳಿಂದಲೇ ಶಾಲೆಯ ಕೀರ್ತಿ, ಹೆಸರುಗಳು ಬೆಳಗಬೇಕಷ್ಟೆ?

ನಾತಾಳಿಯ ಬಿಡುವಿನಲ್ಲಿ ನಿಮ್ಮಲ್ಲಿಗೆ ಬರುವೆ. ರಂಗರಾಯರಿಗೆ ವಂದನೆ ತಿಳಿಸು. ಮಗುವಿಗೆ ಮುತ್ತು!

ನಿನ್ನ ಅಣ್ಣ
**ರಾಮನಾಥ.**

೬

ಧಾರವಾಡ
೨೦-೨-೪೭.

ಗೆಳತಿ ಲಲಿತಾ,

ಈಚೆಗೆ ನಿನ್ನಿಂದ ಓಲೆಯೊಂದೂ ಇಲ್ಲ. ಜೀವನದಲ್ಲಿ ನೆಮ್ಮದಿಯಷ್ಟೆ? ನಿನ್ನ 'ಪತಿರಾಯ'ರಿಗೆ ವರ್ಗವಾಗಿದೆಯೆಂದು ಕೇಳಿದೆ. ಇನ್ನೂ ಮನೆಯ ಸರಂಜಾಮುವನ್ನೂ ಸಾಗಿಸಿಲ್ಲವಷ್ಟೆ?

ನನ್ನ ಜೀವನದಲ್ಲಿ ವಿಶೇಷ ಬದಲಾವಣೆಯೇನೂ ಆಗಿಲ್ಲ. ಶಿಕ್ಷಕ ವೃತ್ತಿಯು ನಿಜಕ್ಕೂ ಪುಣ್ಯದ ಕೆಲಸ. ಎಲ್ಲ ಮಕ್ಕಳೊಡನೆ ನಲಿಯುವ ಭಾಗ್ಯ ಸಿಗುವುದು. ಹೆಚ್ಚಿನ ವಿದ್ಯಾವ್ಯಾಸಂಗಕ್ಕೆ ಅವಕಾಶ ದೊರಕಿಸಲೂ ಬಹುದು.

ನಾನೇನೂ, ಇತ್ತಲಾಗಿ ಸ್ವಲ್ಪ ಸಾಹಿತ್ಯದ ಅಭ್ಯಾಸ ಮಾಡತೊಡಗಿದ್ದೇನೆ. ವೆಂಕಣ್ಣ ಮಾಸ್ತರರು ಕನ್ನಡವನ್ನು ಪ್ರಾಮುಖ್ಯವಾಗಿರಿಸಿಕೊಂಡು ಬಿ. ಎ.ದಲ್ಲಿ

ಮೊದಲನೇ ವರ್ಗ ದೊರಕಿಸಿದುದು ನಿನಗೆ ಗೊತ್ತಿದೆಯಲ್ಲ? ಅವರು ತುಸು ತುಸು ಸಹಾಯಮಾಡುತ್ತಿದ್ದಾರೆ. ಅಷ್ಟು ಸಾಕು.

ವೆಂಕಣ್ಣ ಮಾಸ್ತರರು ಹೊಸಗನ್ನಡ ಸಾಹಿತ್ಯದಲ್ಲಿ ತಮ್ಮ ಕೈಚಳಕವನ್ನು ಚೆನ್ನಾಗಿಯೇ ತೋರಿಸುತ್ತಿದ್ದಾರೆ. ಪತ್ರಿಕೆಯ ಮುಖಾಂತರ ಅವರ ಹೆಸರು ಕೇಳದವರು ಅಪರೂಪ. ಮೊನ್ನೆಯೊಂದು ಕಾದಂಬರಿ ಹೊರಟಿದೆ ಅವರದು. "ಭಗ್ನದೇವತೆ" ಎಂದು ಅದರ ಹೆಸರು. ಆನುವಂಶಿಕವಾಗಿ ಬಂದ ರೂಢಿ ಹಾಗೂ ಇಂದಿನ ಪಾಶ್ಚಾತ್ಯ ಸಂಸ್ಕೃತಿಯ ತಿಕ್ಕಾಟದಲ್ಲಿ ನಮ್ಮ ಹೆಂಗಳೆಯರು ಹೇಗೆ ತತ್ತರಿಸುತ್ತಿದ್ದಾರ ಎಂಬುದೇ ಅದರ ವಿಷಯ.

ನಿಜವಾಗಿಯೂ, ಅವರು ಕನ್ನಡದಲ್ಲಿನ ಬಹುಭಾಗದ ಸಾಹಿತ್ಯದ ಕೊರತೆಯನ್ನು ತುಂಬುವರೆಂದು ಆಶೆಯುದೆ. ಅಂತಹರಿಂದ ನಾಡು ಬೆಳಕು ಕಂಡೀತು. ನಿನಗೆ ಇನ್ನೊಂದು ವಾರದಲ್ಲಿ ಅದರ ಪ್ರತಿಯನ್ನು ಕಳಿಸುವೆ.

ಇಲ್ಲಿ, ಹಿರಿಯರು ಆರೋಗ್ಯವಾಗಿಯೋ ಕುಂಟುತ್ತಲೊ ದಿನಗಳನ್ನು ತಳ್ಳುತ್ತಿದ್ದಾರೆ. ಸಂಬಳದ ಅರ್ಧ ಹಣವು ವೈದ್ಯರ ಉಪಚಾರಕ್ಕೆಯೇ ವ್ಯಯ ವಾಗುವುದು. ನಿರ್ವಾಹವಿಲ್ಲ.

ಬೇಗ ಮರುವೋಲೆ ಬರೆಯುವ ಕೃಪೆಯಿರಲಿ. ನಿನ್ನ

**ಗೌರಿ.**

೭

ಮುಧೋಳ

ಸುಶೀಲಕ್ಕನಿಗೆ, ನಮಸ್ಕಾರಗಳು. ೧೫–೪–೪೭.

ನಿನ್ನೆ ರಾಮನಾಥಣ್ಣನಿಂದ ಪತ್ರ ಬಂದಿದೆ. ಗೌರಿಯ ಬಗೆಗೆ ಕೆಲ ವಿಷಯವನ್ನು ತಿಳಿಸಿದ್ದಾನೆ. ಗಾಳಿಯೊಡನೆ ಅಲೆದಾಡುವ ಮಾತಿಗೆ ಬೆಲೆ ಕೊಡಲಾಗುವದಿಲ್ಲವೇನೋ ನಿಜ. ಆದರೂ ಅವುಗಳನ್ನು ಕೀಳೆಣಿಸಿ ಚೆಲ್ಲಿ ಕೊಡುವುದು ಅನ್ಯಾಯವಾದೀತು. ಅಣ್ಣ ಬರೆದುದು ಇಷ್ಟು.

"ಗೌರಿ ಮತ್ತು ವೆಂಕಣ್ಣ ಮಾಸ್ತರರ ಪರಿಚಯದ ಹೀಚು ಇಂದು ಪಾಡಿಗೆ ಬಂದ ಕಾಯಿಯಾಗಿದೆ ಹಣ್ಣು ಪಥ್ಯಕರವೋ ಅಪಥ್ಯವೋ – ಹೇಳುವುದು ಕಠಿಣವೇ. ಶಾಲೆಯಲ್ಲಿಯ ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಅವರ ಬಗೆಗೆ ಮೊದಲಿನ ಆದರದ ಸ್ಥಳದಲ್ಲಿ ಜುಗುಪ್ಸೆಗೆ ಎಡೆಗೊಡುತ್ತಿದ್ದಾರೆ. ಅವರೂ ಆ ವಿಷಯವನ್ನು ಸಮಾಲೋಚಿಸಬಹುದೇ?

ನನಗೇನೋ ಪರಿಸ್ಥಿತಿಯು ಹದಮೀರಿದಂತೆ ಕಾಣುವದಿಲ್ಲ. ಒಂದು ವೇಳೆ ಒಬ್ಬರನ್ನೊಬ್ಬರು ಪ್ರೀತಿಸುವುದು ತಪ್ಪೂ ಆಗಲಾರದು ಗೌರಿಯೇನೋ ಪರಿಸ್ಥಿತಿಯ ಸಂಸುಕಟ್ಟಿಗೆ ಸಿಲುಕಿ ಮೇಧಾವಿಯಾಗಿರಲು ಒಮ್ಮೆ ನಿಶ್ಚಯಿಸಿರ ಬಹುದು. ಆದರೆ, ಆ ಬಗೆಯು ಜೀವನವನ್ನು ಸಾಗಿಸಿಕೊಂಡು ಹೋಗುವವ ಸಾವಿರದಲ್ಲೊಬ್ಬ. ನಾವು ಒಮ್ಮೊಮ್ಮೆ ಭಾವನಾಪರವಶರಾಗಿಯೋ ಇಲ್ಲವೆ ಸುತ್ತಣ ವಾತಾವರಣಕ್ಕೆ ಸಿಲುಕಿಯೋ ದೊಡ್ಡ ದೊಡ್ಡ ಆದರ್ಶಗಳನ್ನು ನಮ್ಮ ಧ್ಯೇಯವಾಗಿರಿಸಿಕೊಳ್ಳುತ್ತೇವೆ. ಆಗ, ಮುಂದೆ ಬರಬಹುದಾದ ಎಡರು ತೊಡರುಗಳ ಕಲ್ಪನೆ ನಮಗಿರುವದಿಲ್ಲ. ಒಮ್ಮೆ ಗಂಡಾಂತರಕ್ಕೆ ಸಿಲುಕಿದವ್ರೋ, ಆಗ ಮಾತ್ರ ಮನಸ್ಸಿನ ಸ್ಥೈರ್ಯ ಉಳಿಯುದೆಯೇ ಕೈಸಾಗದವರಾಗುತ್ತೇವೆ. ಹೇಡಿತನವು ನೈಯನ್ನೂ ಮನಸ್ಸನ್ನೂ ಆವರಿಸುವುದು 'ಹಿಂದಣ ಮನೆಯು ಕೋರಾಣವೂ ಹೋಯಿತು; ಮುಂದಣ ಮನೆಯ ಭಿಕ್ಷೆಯೂ ಹೋಯಿತು' ಎನ್ನುವ ಸ್ಥಿತಿಯೊದಗುವುದು. ಆಗ ಇದ್ದಬಿದ್ದವರಿಗೂ ಮೊರೆಹೋಗು ವೆವು.

ಗೌರಿಯ ಸ್ಥಿತಿಯು ಆ ಮಟ್ಟಕ್ಕೆ ಬಂದಿದೆಯೆಂದೂ, ಬರಬಹುದೆಂದೂ ನಾನೂ ತಿಳಿಯಲಾರೆ. ಇಬ್ಬರೂ ಸುಶಿಕ್ಷಿತರು, ಆದರ್ಶವಾದಿಗಳು. ಒಬ್ಬರ ನ್ನೊಬ್ಬರು ಅರಿಯಬೂಬಹುದು. ಅವರ ಮದುವೆಯಾದರೆ ವಿಹಿತವೆ!

ಅಂದಿನ ಗೌರಿಯ ನಿಶ್ಚಯ ಅಂದಿಗೆ ಸರಿಯಿರಬಹುದು. ಆದರೆ, ಸಹಜವಾಗಿ ಸೂಕ್ಷ್ಮವಾಗಿ ಜೀವನದಲ್ಲಾಗುವ ವ್ಯತ್ಯಾಸಗಳನ್ನರಿತರೆ, 'ಅದು ಹೇಗೆ ಸಾಧ್ಯ?' ಎಂಬ ತೊಡಕು ಇಣಿಕುತ್ತಿದೆ. ಮಾನವನ ಕಟ್ಟಳೆಗಳು ಆದರ್ಶಗಳು ಎಷ್ಟೇ ನಿಕಟ ಮನಸ್ಸಿನಿಂದ ಆಚರಿಸಲ್ಪಡಲಿ, ನೈಸರ್ಗಿಕ ಸ್ಥಿತ್ಯಂತರ ವೊಂದು ಬಾಳಿನುದ್ದಕ್ಕೂ ನಡೆದು ಬರುತ್ತಿದೆ. ಜೀವಿಯು ಅದಕ್ಕೆ ಅನಿವಾರ್ಯ ವಾಗಿ ಬಲಿಯಾಗುವದುಂಟು.

ಏನೇ ಇರಲಿ. ಅವರ ಬಾಳು ಒಳ್ಳೆಯದೇ ಆಗಲಿ ಎಂದು ನನ್ನ ಹಂಬಲ."

ಈ ವಿಷಯ ಕುರಿತು ಚರ್ಚಿಸುವಷ್ಟು ಅನುಭವ, ಬುದ್ಧಿ ನನ್ನದಲ್ಲ, ಅಕ್ಕಾ. ಅದು ನಿನ್ನ ಪಾಲಿನದು. ವಿಚಾರ ತಿಳುಹಿಸು.

ನಿನ್ನ ತಂಗಿ

**ಕುಸುಮಾ.**

೮

ಪುಣೆ ನಗರ

ಗೆಳತಿ ಗೌರಿ, ೧೨-೬-೪೭.

ನಿನ್ನೆ ನನಗೆ ಹಳೆಯ ಗೆಳತಿಯೋರ್ವಳಿಂದ ಪತ್ರ ಬಂದಿದೆ. ಅದರಲ್ಲಿ ನಿನ್ನ ವಿಷಯ ಕುರಿತು ಒಂದೆರಡು ಮಾತುಗಳಿವೆ. ಓದಿದೊಡನೆ ಎದೆ ಬೆಚ್ಚಿತು. ಮೈ ನವಿರಿತು. ನಾನು ಕಲ್ಪನೆಯಲ್ಲಿ ಕೂಡ ಈ ರೀತಿ ಸಂಭವಿಸಬಹುದೆಂದು ಎಣಿಸಿರಲಿಲ್ಲ. ಇನ್ನೂ ವಿಷಯವನ್ನು ನಂಬಲಾರದಾಗಿದ್ದೇನೆ.

ಅಲ್ಲಿನ ಮಾತುಗಳನ್ನೇ ಇಲ್ಲಿ ಇಡುವೆ:

"ಗೌರಿ ಮತ್ತು ವೆಂಕಣ್ಣ ಮಾಸ್ತರರ ಸಹಾನುಭೂತಿ, ಸೌಹಾರ್ದತೆಗಳು ಪ್ರಣಯದಲ್ಲಿ ಮೈಗೊಂಡು ಪರಿಸ್ಥಿತಿಯನ್ನು ತುಂಬ ಹದಗೆಡಿಸಿವೆ. ಶಾಲೆಯ ನೆರೆಹೊರೆಯಲ್ಲಂತೂ ಸರಿಯೇ, ಅದು ಮೇಲಣ ಅಧಿಕಾರಿಗಳ ವರೆಗೂ ತಲುಪಿದೆ.

ಗೌರಿ, ಇದೀಗ ಬಸಿರೆ. ಮೇಲಿನ ಶಿಕ್ಷಣಾಧಿಕಾರಿಗಳು ಒಳ್ಳೆಯವರೆಂದು ಕಾಣುತ್ತಿದೆ. ಅವರಿಬ್ಬರಿಗೂ ಮದುವೆಯಾಗಲು ಸೂಚಿಸಿದರಂತೆ. ಗೌರಿಯು ಒಪ್ಪಬೇಕಾದುದು ಅನಿವಾರ್ಯವೇನೋ ನಿಜ. ಆದರೆ, ವೆಂಕಣ್ಣ ಮಾಸ್ತರರು ಒಪ್ಪದಿದ್ದಲ್ಲಿ ವ್ಯವಸಾಯದಿಂದ ತಳ್ಳಲಾಗುವದೆಂದು ಗುಟ್ಟಾಗಿ ತಿಳಿಸಿದ್ದಾರಂತೆ."

ಇದು ನಿಜವೆ, ಗೌರಿ? . . . ನಿಜವಿದ್ದರೆ . . . ?

ಇಲ್ಲಿ, ನನ್ನದೂ ಒಂದು ಸೂಚನೆಯಿದೆ. ಮೊದಲಿನ ಪರಿಸ್ಥಿತಿಯು ಈಗ ಇಲ್ಲವೆನ್ನೋಣ. ಆದರೆ ಈಗಿನ ಹದದಲ್ಲಾದರೂ ಒಂದು ಸುಗಮ ದಾರಿ ಕಂಡುಕೊಳ್ಳಬೇಕಷ್ಟೆ? ಆ ದಾರಿಯೆಂದರೆ, ನೀನು ವೆಂಕಣ್ಣ ಮಾಸ್ತರರೊಡನೆ ಮದುವೆಯಾಗಲೇಬೇಕು. ಆಗ ನಿನಗೂ ಚೆನ್ನು. ಮಾಸ್ತರರ ಮರ್ಯಾದೆಯೂ ಉಳಿಯುವುದು. ಇಲ್ಲದಲ್ಲಿ ಕೊನೆಯವರೆಗೂ ಅಪವಾದವು ತಪ್ಪಲಿಕ್ಕಿಲ್ಲ. ಹೆಚ್ಚು ಹೇಳಲಾರೆ.

ನಿನ್ನ

ಲಲಿತಾ.

೯ ಧಾರವಾಡ

ಪ್ರಿಯ ಲಲಿತಾ, ೨೦–೬–೪೭.

ನೀನು ಯಾವ ವಿಷಯದಲ್ಲಿಯೂ ಸಂಶಯಪಡಬೇಕಾಗಿಲ್ಲ. ನೀನರಿತ ಸಂಗತಿಯು ನನ್ನಾಣೆಗೂ ನಿಜ. ಆದರೆ, ಅದಕಾಗಿ ನಾನು ಅಂಜುತ್ತಲೂ ಇಲ್ಲ. ಈಗಾಗಲೇ ಒಂದು ನಿರ್ಣಯಕ್ಕೆ ಬಂದಿದ್ದೇನೆ. ಬೇರೇನು ಇಲ್ಲ, 'ನಾನು ಮದುವೆಯಾಗುವದಿಲ್ಲ!' – ಎನ್ನುವುದೇ!

ಆದುದನ್ನು ನೆನೆದುಕೊಂಡಾಗ ಇಂದಿನ ವಿಷಮ ವಾತಾವರಣಕ್ಕೆ ನಾನೇ ಕಾರಣಳು – ಎಂಬ ಅರಿವಿದೆ ನನಗೆ. ವೆಂಕಣ್ಣ ಮಾಸ್ತರರ ಮೇಲೆ ಯಾವ ದೋಷಕ್ಕೂ ಎಡೆಯಿಲ್ಲ. ಅವರು ನಿಜಕ್ಕೂ ದೇವರಂತಹ ಮನುಷ್ಯರು! ಅವರ ವಿಷಯದಲ್ಲಿ ತಪ್ಪು ಮಾತಾಡಿದರೆ ನನ್ನ ಬಾಯಿಗೆ . . . .

ಶಿಕ್ಷಣಾಧಿಕಾರಿಗಳ ಗುಡುಗು ಅನವಶ್ಯಕವಾಗಿತ್ತು. ವೆಂಕಣ್ಣ ಮಾಸ್ತರರು ಕೇಳಿದರು: "ಗೌರಾ, ನನ್ನದಂತೂ ಮದುವೆಗೆ ಸಮ್ಮತ. ನಿನ್ನದು?"

ಅವರ ಉದಾರ ಹೃದಯದ ವಿರುದ್ಧವಾಗಿ ನನ್ನದು ಕಲ್ಲೆದೆ. ಅದರಿಂದ ಅವರ ಪ್ರೇಮವನ್ನು ನಿರಾಕರಿಸುತ್ತೇನೆಂದಲ್ಲ. ನಾನೇ ಅವರೆಡೆಯ ಮೊದಲ ಭಿಕ್ಷುಕಿ . . . .

ಆದರೆ, ನನ್ನ ವಿಚಾರವಿಂದು ಬೇರೆಯಾಗಿದೆ, ಲಲಿತಾ. ನಾನು ಮದುವೆಯಾದರೆ ನನ್ನ ತಂದೆತಾಯಿಗಳ ಗತಿಯೇನು? ವೆಂಕಣ್ಣ ಮಾಸ್ತರರ ಮೇಲೆ ಅವರ ಹೊಣೆ ಹೊರಿಸಲು ನಾನು ಒಪ್ಪಲಾರೆ. ಅವರ ಪ್ರಪಂಚವೇ ಅವರಿಗೆ ಭಾರ. ಮನೆಯಲ್ಲಿ ಹತ್ತಾರು ಜನ ಅವರಿಗೆ. ಜಾತಿಯ ವಿಷಯವೂ ನಡು ಇಣಿಕುತ್ತಿದೆ ಎನ್ನು. ಅಂತು ಈ ವಿವಾಹವು ಸ್ವಲ್ಪ ಅವ್ಯವಹಾರ್ಯವೆ! ಅವರ ಮನೆಯಲ್ಲೆಲ್ಲ ನಾವು ವಿಚಿತ್ರ ವ್ಯಕ್ತಿಗಳಾಗಿ ಕೂಡಬಾರದು.

'ನಾನು ಒಲ್ಲೆ!' ಎಂದು ವೆಂಕಣ್ಣ ಮಾಸ್ತರರಿಗೆ ತಿಳಿಸಿಬಿಟ್ಟಿದ್ದೇನೆ. ಅವರು ನನ್ನನ್ನು ಮೋಸಗಾರಳು ಎಂದು ಕರೆದರೂ ಅಡ್ಡಿಯಿಲ್ಲ. ಹೆರವರ ಸುಖಕ್ಕೆ ಮುಳ್ಳಾಗಿ ಇಲ್ಲವೆ ನಮ್ಮ ಜೀವನವನ್ನು ತೊಡಕುಮಾಡಿ ಮದುವೆ ಮಾಡಿಕೊಳ್ಳುವುದು ಅಹಿತ!

ಶಿಕ್ಷಣಾಧಿಕಾರಿಗಳಿಗೂ, ನನ್ನನ್ನು ಹಾಗೂ ಅವರನ್ನು ಕೂಡಿಯೆ ಬೇರೆಬೇರೆ ಸ್ಥಳಕ್ಕೆ ವರ್ಗಾಯಿಸಲು ಕೇಳಿಕೊಂಡಿದ್ದೇನೆ. ವಿಶೇಷವಿಲ್ಲ. ನಿನ್ನ

**ಗೌರಿ.**

೧೦

ಪುಣೆ ನಗರ

ಸುಶೀಲಾ, ೧-೮-೪೭.

ಗೌರಿಯ ಜೀವನವು ವಿಚಿತ್ರವಾಗಿಯೇ ಮೊದಲುಗೊಂಡು ವಿಚಿತ್ರವಾಗಿಯೇ ಪರಿಣಮಿಸಿತು. ಅವಳು ವಿಜಾಪುರದಲ್ಲಿ ಶಾಲಾ ಶಿಕ್ಷಿಕೆಯಾಗಿಯೂ, ವೆಂಕಣ್ಣ ಮಾಸ್ತರರು, ಕಾರವಾರಕ್ಕೂ ವರ್ಗಾಯಿಸಲ್ಪಟ್ಟಿದ್ದಾರೆ. ಅವಳ ಜೀವನದ ಕನಸು ಕಂಡವರಾರು?

ಧಾರವಾಡದಲ್ಲಿ ಅವಳ ಹೆಸರು ಮಾತ್ರ ತೀರ ಅಪಹಾಸಕ್ಕೆ ಗುರಿಯಾಗಿದೆ. ಉಪಾಯವಿಲ್ಲ.

ವೆಂಕಣ್ಣ ಮಾಸ್ತರರದೇನು? ಗಂಡಸರು ಇಂದಿಲ್ಲ, ನಾಳೆ ಬೇರೊಬ್ಬ ವಧುವನ್ನು ಮದುವೆಯಾದಾರು. ಕೆಲದಿನ ಅವರಿಗೂ ಸ್ವಲ್ಪ ನೋವೇ ಸರಿ!

ನಿನ್ನ

**ಲಲಿತಾ.**



# ಸೋಲಿನ ಸಾಲು

ಸೇವ ನೇಮಿರಾಜ ಮಲ್ಲ

ನಿರಂತರವಾದ ಈ ಹೀನಜೀವನ ಅವನನ್ನು ಅಮಲೇರಿಸಿತ್ತು. ಅವನ ಜೀವನವನ್ನು ಅವನು ಸಿಂಹಾವಲೋಕಿಸುವಾಗ ಸೋಲಿನ ಸಾಲು ಉಪ್ಪಕ್ಕೊ ಹೆಣೆದಿದ್ದುದು ಕಾಣುತಿತ್ತು. ಇಲ್ಲ, ಅವನು ತಡೆಯಲಾರ: ಈ ರೀತಿಯಲ್ಲಿ ಅವನು ಜೀವನವನ್ನು ನಡೆಸುವುದು ಅಶಕ್ಯ.

ಮನುಷ್ಯನ ದೊಡ್ಡ ಪಾತಕವೆಂದರೆ, ಅವನ ಜನನ— ಈ ನಾಣ್ನುಡಿ ಪ್ರತಿದಿನವೂ ಅವನಿಗೆ ಸ್ಪಷ್ಟವಾಗುತಿತ್ತು. ಹಾಗೆಂದಮೇಲೆ ತನ್ನನ್ನೇ ತಾನು ಕೊಲ್ಲಲೇ, ಆಗ ತನ್ನ ಸೋಲುಗಳಿಗೆ ಅಂತ್ಯವಾದೀತೇ, ಎಂದು ಹಲವು ಬಾರಿ ತನ್ನೊಳಗೆ ತರ್ಕಿಸಿದ್ದ. ಆದರೆ ತನ್ನನ್ನೇ ತಾನು ಕೊಲ್ಲುವುದೆಂದರೆ ಅದಕ್ಕಿಂತ ಹೆಚ್ಚಿನ ಸೋಲು ಬೇರಿಲ್ಲ. ಆಗ ತಾನು ಶುದ್ಧ ಹೇಡಿ.

ಮತ್ತೆಲ್ಲಿ ವಿಮೋಚನೆ? ಪ್ರಾಪಂಚಿಕ ಸಂಬಂಧವಿರುವ ತನಕ ಈ ಬಾಧೆ ತಪ್ಪಿದುದಲ್ಲ ಆದರೆ ಅದನ್ನು ಆದಷ್ಟು ಕಡಿಮೆ ಮಾಡಬೇಕು.

ಬೈರಾಗಿಯೊಬ್ಬ ಅಲ್ಲಿಂದ ಹಾದುಹೋಗುತ್ತಿದ್ದ. ಕೈಯಲ್ಲಿ ನೀರಿನ ಕಮಂಡಲ, ಹೆಗಲ ಮೇಲೊಂದು ಸಣ್ಣ ಜೋಳಿಗೆ. ಕ್ಷೌರದ ಪದ್ಧತಿಯಿಲ್ಲ. ಕುತ್ತಿಗೆಯಲ್ಲಿ ಒಂದು ರುದ್ರಾಕ್ಷಿಯ ಸರ. ಹಣೆಯಲ್ಲಿ ಭಸ್ಮ.

ಅವನಿಗೆ ಬೈರಾಗಿಯ ಮುಖದಲ್ಲಿ ಅನಂತ ಶಾಂತಿ ಕಾಣುತಿತ್ತು. ಆ ಬೈರಾಗಿ ಎಲ್ಲಿ ಹುಟ್ಟಿದ್ದನೋ, ಏನಾಗಿದ್ದನೋ, ಯಾರು ಬಲ್ಲರು? ಅವನಿಗೆ ಲೋಕದ ಗೊಡವೆಯಿಲ್ಲ, ತನ್ನ ಗೊಡವೆಯಿಲ್ಲ, ತನ್ನನ್ನು ಯಾರಾದರೂ ಸುಲಿದಾರು, ತನ್ನ ಆದಾಯವನ್ನು ಜನರು ಕಸಿದಾರು, ತನ್ನ ಮನೆಯನ್ನು ಕಳ್ಳರು ಸೂರೆಮಾಡಿಯಾರು, ಮತ್ತೆ ತನಗೆ ಅನ್ನ ಸಿಗಲಿಕ್ಕಿಲ್ಲ, ತನ್ನ ಹೆಂಡತಿ ಮಕ್ಕಳು

ಭಿಕಾರಿಗಳಾದರು ಎಂಬಿತ್ಯಾದಿ ಯಾವ ಕುತೂಹಲ ಯುಕ್ತ ಹೆದರಿಕೆಯೂ ಅವನ ಬಳಿ ಸುಳಿಯದು. ಅವನದು ಪೂರ್ಣ ತೃಪ್ತ ಜೀವನ. ಆ ಘಟ್ಟ ಕ್ಕೇರಲು ಅವನು ಬೆಲೆಕೊಟ್ಟುದೆಂದರೆ ಬರೇ ಆಸೆಯನ್ನು ಮಾತ್ರ. ಅಷ್ಟಕ್ಕೇ ಅವನು ಲೋಕದಿಂದ ಅಷ್ಟು ದೂರವಾದ. ಎಲ್ಲಕ್ಕಿಂತ ಮೇಲಾಗಿ ಅವನಿಗೆ ಕಹಿಸಿಹಿಗಳ ಭೇದವಿಲ್ಲ.

ರಂಜನ್ ನಿಜವಾಗಿಯೂ ಬೈರಾಗಿಯ ಜೀವನಕ್ಕೆ ಅಸೂಯೆಪಟ್ಟ, ತಾತ್ವಿಕ ದೃಷ್ಟಿಯಿಂದ.

ವ್ಯವಹಾರ ದೃಷ್ಟಿಯಿಂದ ಅದು ಅವನಿಗೆ ಸಾಧ್ಯವಿಲ್ಲ. ಮನೆಯಲ್ಲಿ ಇರುವ ತಾಯಿ ಮುದುಕಿ, ಮತ್ತೆರಡು ಹೆಂಗಸರು, ಅವನ ಸಂಬಂಧಿಕರು ಅವರಿಗೆ ರಂಜನ್ ಕಣ್ಣು. ಅವನ ದುಡಿಮೆಯಿಂದ ಅವರ ಜೀವನ ಸಾಗ ಬೇಕು; ಅವರ ನೋವು ಬೇನೆಗಳ ಪರಿಹಾರವಾಗಬೇಕು. ಅವರಿಗೆ ಮನೆ ಕೆಲಸಕ್ಕಿಂತ ಹೆಚ್ಚಿಗೆ ಏನನ್ನು ಮಾಡಲೂ ತಿಳಿಯದು.

ಅವನ ದುಡಿತ ಮಾತ್ರವಲ್ಲ, ಮನಸ್ಸು ಕೂಡ ಕರಗಿ ಹೋಗುತಿತ್ತು, ಒಮ್ಮೊಮ್ಮೆ ಅವರಿಂದಾಗಿ.

ಅವನು ಹೇಳಿದುದನ್ನು ಅವರು ಎಂದೂ ಕೇಳಲಿಕ್ಕಿಲ್ಲ. ಅವರ ಗೌರವ-ಘನಸ್ತಿಕೆಗಳಿಗಂತೂ ತುದಿಯೇ ಇಲ್ಲ. ಮನೆಯಲ್ಲಿ ಸಾಂಪ್ರದಾಯದಂತೆ ದಾನ-ಧರ್ಮಗಳು, ಪೂಜೆ-ಅರ್ಚನೆಗಳು ಸದಾ ನಡೆಯುತ್ತಲೆ ಇರಬೇಕು. ಅವರಿಗೆ ಸೌಖ್ಯವಿಲ್ಲದಿದ್ದರೆ ಅವನು ತಂದ ಔಷಧಿಯನ್ನು ಎಂದೂ ತೆಗೆದು ಕೊಳ್ಳರು. ಆಸ್ಪತ್ರೆಯ ಮದ್ದಿನಲ್ಲಿ ಪ್ರಾಣಿಸಂಬಂಧವಾದ ಸತ್ವಪದಾರ್ಥಗಳಿವೆ ಯೆಂದು ಅವರ ಮತ. ಅವನು ಅವರಿಗಾಗಿ ಪಡಕೊಂಡ ಸೀರೆಗಳು ಅವರಿಗೆ ಮೆಚ್ಚವು. ಮತ್ತೆ ಅವನ ನಡೆನುಡಿಗಳಂತೂ ಅವರ ತೀಕ್ಷ್ಣ ವಿಮರ್ಶೆಗೆ ಒಳಗು. ಅವನು ಸ್ನಾನಮಾಡಲಿಲ್ಲ, ಜಪಮಾಡಲಿಲ್ಲ, ಮಡಿ ಉಟ್ಟುಕೊಳ್ಳ ಲಿಲ್ಲ – ಇಂಥ ದೂರುಗಳಿಗಂತೂ ಲೆಕ್ಕವೇ ಇಲ್ಲ.

ಹಣದ ಮಟ್ಟಿಗೆ ಅವನು ಯಜಮಾನನಾಗಿದ್ದರೂ, ಹಿರಿಯರು ಅವರು,

ಎಲ್ಲಕ್ಕಿಂತ ಮೇಲಾಗಿ ಅವನ ಹೃದಯ ಬಹಳ ಸೂಕ್ಷ್ಮಗ್ರಾಹಿ. ಒಂದು ಸಣ್ಣ ಯೋಚನೆ ಕೂಡ ಅವನಿಗೆ ಒಮ್ಮೊಲೆ ಬಗೆಹರಿಯದ ಸಮಸ್ಯೆಯಾಗು ವುದು; ಅವನು ಅದನ್ನು ಅಣುಕಣಗಳನ್ನಾಗಿ ಸೀಳಿ ಏಕಾಂತದಲ್ಲಿ ಪರಿಶೀಲಿಸು ವನು; ಅವನ ಮನಸ್ಸು ಆಗ ಭಾರವಾಗುವುದು ತನ್ನೊಳಗೇ ಕಣ್ಣೀರಿಡು

ವನು, ಕೊರಗುವನು. ದಿಕ್ಕುಗೆಟ್ಟು ಕಂಗಲಾಗುವನು. ಜೀವನದಲ್ಲಿ ಜಿಗುಪ್ಸೆ ತನ್ನಿಂದ ತಾನೇ ಹುಟ್ಟುವುದು.

ಅವನ ತಂದೆಯಿರುವಾಗ ಅವನು ಸ್ವಲ್ಪ ರಾಜಕೀಯ ತತ್ವಗಳನ್ನಭ್ಯಸಿಸಿದವ. ಆಗ ಅನೇಕ ಸಿದ್ಧಾಂತಗಳನ್ನು ಪರಿಶೀಲಿಸಿ ತನಗೆ ಸಮಂಜಸವಾಗಿ ಕಂಡ ಧ್ಯೇಯದ ಕನಸನ್ನು ಕಂಡಿದ್ದ. ಆ ರೀತಿಯ ಸಮಾಜವನ್ನು ಕಲ್ಪಿಸಿದ್ದ. ಅದರಲ್ಲಿ ದುಡಿಯದ ದಡ್ಡರಿಗೆ ಸ್ಥಾನವಿರಲಿಲ್ಲ; ಇನ್ನೊಬ್ಬರ ದುಡಿತದಿಂದ ತಮ್ಮ ಹೊಟ್ಟೆಹೊರುವ ನರರಾಕ್ಷಸರನ್ನಂತೂ ಅವನಿಗೆ ಕಂಡರಾಗದು. ತನ್ನ ಧ್ಯೇಯವನ್ನು ಎಷ್ಟೋ ಮುಖಗಳಿಂದ ಬಹಿರಂಗಪಡಿಸಿದ್ದ. ಮುಖ್ಯವಾಗಿ ಅದನ್ನು ಪೂರ್ಣ ಅವನು ನಂಬಿದ್ದ, ಅದರಲ್ಲಿ ಬಾಳಲು ಪ್ರಯತ್ನಿಸಿದ್ದ. ಅವನ ಲೋಕದಲ್ಲಿ ಆಗ, ಜ್ಞಾನಾಂಧತೆ, ಮೇಲು-ಕೀಳು – ಇವೆಲ್ಲ ಮಣ್ಣಿನಡಿಯಲ್ಲಿ.

ಆದರೆ ಇವೆಲ್ಲ, ತಂದೆಯಿರುವ ವರೆಗೆ, ಅವರು ಅವನಿಗೆ ಅನ್ನ ಕೊಡುತ್ತಿದ್ದ ವರೆಗೆ.

ಆಮೇಲೆ ಮನೆಯ ಜವಾಬ್ದಾರಿ ಪೂರ್ಣ ಅವನ ಮೇಲೆ ಬಿತ್ತು. ಅವನ ಸ್ವತಂತ್ರ ಜೀವನದ ಕಲ್ಪನೆ ಅಲ್ಲಿ ಮಾಯವಾಯಿತು. ಜೀವನದ ಕಟು ಸತ್ಯಗಳನ್ನು ಅವನು ಇದುರಿಸಬೇಕಾಯಿತು. ಅವನ ಮನೆಯೋ ಭಯಂಕರವಾದ ದ್ವೇಷಾಸೂಯೆಗಳ ಅಭೇದ್ಯ ದುರ್ಗದಿಂದ ಸುತ್ತುವರಿದಿತ್ತು.

ಅದನ್ನು ನೆನೆದೇ ಅವನ ಅರ್ಧ ಜೀವ ಹಾರಿಹೋಯಿತು. ರಾಜಕೀಯ ತತ್ವನಿಷ್ಠೆಗಳೆಲ್ಲ ಗಾಳಿ ಪಾಲಾದುವು. ಅಂದಿನಿಂದ ಅವನನ್ನು ಸನ್ನಿವೇಶಗಳು ನಡೆಸತೊಡಗಿದುವು; ಮನಸ್ಸು ಅವನಿಂದ ಬೇರೆಯಾಯಿತು.

ಇನ್ನು ಅವನು ಹೊಸ ಬಾಳಿನ ರೂಪರೇಷೆಯನ್ನು ನಿರ್ಮಿಸಬೇಕಾಗಿತ್ತು. ಅವನದಕ್ಕೆ ಸಿದ್ಧನಿರದಿದ್ದರೂ, ವಿಷಯಗಳೆಲ್ಲ ತಮ್ಮಿಂದ ತಾವಾಗಿ ರೂಪುಗೊಂಡುವು. ಅವನು ಅವುಗಳನ್ನು ಹಿಂದಿನ ತನ್ನ ಜೀವನದ ಘಟ್ಟದಲ್ಲಿ ಕನಸಿನಲ್ಲಿ ಕೂಡ ನೆನೆಸಿರಲಿಲ್ಲ. ಬೇಡ ಬೇಡವೆಂದು ಅವನು ಇಚ್ಛಿಸಿದಂತೆಯೋ ಮೂರು ಹೆಂಗಸರನ್ನು ರಕ್ಷಿಸುವ ಭಾರ ಅವನ ಮೇಲೆ ಪರ್ವತದಂತೆ ಜರಿದು ಬಿತ್ತು. ಹಿಂದೆ ಅವನ ಅಭಿಮತವನ್ನು ಅನುಕರಿಸುತ್ತಿದ್ದ ಗೆಳೆಯರ ಸಹೃದಯ ಒಡನಾಟ ಅಲ್ಲಿಗೆ ನಿಂತಿತು.

ಅವನು ಆಮೇಲೆ ಬರೇ ಒಂದು ವ್ಯಕ್ತಿಯಾದ.

ದಿನದಿನವೂ ಮನೆಯವರ ಗೊಣಗುಟ್ಟುವಿಕೆ, ಟೀಕೆಗಳು ಹೆಚ್ಚುತ್ತ

ಬರುತ್ತಿದ್ದುವು. ಅವನೀಗ ಒಲ್ಲವೆಂದು ತಿಳಿದುಕೊಳ್ಳುವಷ್ಟರ ಗ್ರಹಣಶಕ್ತಿ ಅವರಲ್ಲಿರಲಿಲ್ಲ. ಅವನು ಅವರಿಂದ ತಪ್ಪಿಸಿಕೊಳ್ಳಲು ಬಹಳ ಯತ್ನಿಸಿದ. ಅದೇನೂ ಪರಿಣಾಮಕಾರಿಯಾಗಲಿಲ್ಲ.

ಒಮ್ಮೊಮ್ಮೆ ಅವರೊಡನೆ ಜಗಳಮಾಡಿ ತಾನು ಅವರಿಂದ ಬೇರಾಗಲೇ ಎಂದು ಹೊಳೆಯುತ್ತಿತ್ತು. ಆದರೆ ಲೋಕ ಏನೆಂದೀತು? ತನ್ನನ್ನು ಹೆತ್ತು ಹೊತ್ತ ತಾಯಿ ಏನು ಮಾಡಿದರೂ ತಾನು ಸಹಿಸಿಕೊಳ್ಳಲೇಬೇಕು. ಮತ್ತೆ ಉಳಿದವರಿಬ್ಬರು ಸಂಪೂರ್ಣ ಅನಾಥರು; ಅವರಿಗೂ ಬೇರೆ ಮಾರ್ಗವಿಲ್ಲ. ಆದರೆ ಇವರೆಲ್ಲರನ್ನು ತನ್ನ ದೃಷ್ಟಿಕೋನಕ್ಕೆ ಪರಿವರ್ತಿಸುವುದು ಅಸಾಧ್ಯ.

ಅನಂತರದ ಮಾತು. ಅವರ ಜೀವನವೇ ಅಂಥ ಸಂಕುಚಿತ ವಾತಾವರಣದಲ್ಲಿ ರೂಪುಗೊಂಡುದುದು ಅವರ ಅಂಧಶ್ರದ್ಧೆಗಳು ರಕ್ತದೊಡನೆ ಮಿಲನವಾಗಿ ನಾಡಿನಾಡಿಗಳಲ್ಲಿ ವಾಸವಾಗಿವೆ.

ಅವನ ಸೈದ್ಧಾಂತಿಕ ಭಾವನೆಯುಲ್ಲೂ ಅವರಿಗೆ ಅವನಲ್ಲಿ ನಿರ್ದಿಷ್ಟವಾದ ಸ್ಥಾನವೊಂದಿರಲಿಲ್ಲ. ಮುಖ್ಯವಾಗಿ ಅವರೂ ಬಾಳಲರ್ಹರಾದ ಮಾನವರು. ಹಣದ ಸಾಮ್ರಾಟರಲ್ಲ. ಅವನು ಶಪಿಸುತ್ತಿದ್ದ ಜನರ ವರ್ಗಕ್ಕೆ ಅವರೂ ಸೇರಿದ್ದರೂ ಅವರ ಮೇಲೆ ಬೋಧನೆಯೊಂದಲ್ಲದೆ ಬೇರೆ ಯಾವ ಕ್ರಮವನ್ನೂ ಕೈಗೊಳ್ಳಲು ಸಾಧ್ಯವಿಲ್ಲ. ಹಾಗಾದರೆ ಅವನು ಅವರು ಸಾಯುವ ವರೆಗೆ ಕೊರಗುತ್ತಲೇ ಇರಬೇಕು. ಅವರು ಸಾಯಬೇಕೆಂದು ಅವನು ಬೇಕಾಗಿ ಬಯಸಲಿಲ್ಲ. ಆದರೆ ಅವರು ಏಕಾಗಿ ಬದುಕುತ್ತಿರಬೇಕೆಂದು ಅವನಿಗೆ ತಿಳಿಯದಾಯಿತು.

ಕೊನೆಗೆ ಅವನು ತನ್ನ ಕೆಲಸ ಮುಗಿದು ಬಿಡುವಿರುವ ಸಮಯದಲ್ಲಿ ಬೀದಿಬೀದಿ ತಿರುಗಾಡತೊಡಗಿದ. ಮನೆಗೆ ಊಟಕ್ಕೆ ಮಾತ್ರ ಬರುವುದು. ರಾತ್ರಿಯಾದ ಬಳಿಕ ಎಲ್ಲಾದರೂ ಒಂದು ಖಾಲಿ ಜಗುಲಿಯುಲ್ಲಿ ಮಲಗುವುದು. ಒಂದೆರಡು ಸಲ ರಂಜನ್ ಅವರನ್ನು ಬೇಡಿದ್ದ ತನ್ನ ಗೋಜಿಗೆ ಬರಬಾರದೆಂದು. ಆದರೆ ಅವನ ಬೇಡಿಕೆಗಳೆಲ್ಲ ಜೀವವಿಲ್ಲದ ಕಿವಿಗಳೊಳಗೆ ಬಿದ್ದವು. ಅವನಿಗೆ ಅವನ ಜೀವನವನ್ನೇ ಸಹಿಸದಂತೆ ಮಾಡುವ ಪ್ರಸಂಗಗಳನ್ನು ಅವರು ದಿನ ದಿನವೂ ತಂದೊಡ್ಡುತ್ತಿದ್ದರು.

ಆದರೆ ಅವರು ಅವನನ್ನು ಸೋಲಿಸಬೇಕೆಂಬ ಉದ್ದೇಶದಿಂದ ಹೀಗೆಲ್ಲ ಮಾಡುತ್ತಿದ್ದರೆಂದು ತಿಳಿಯಲಾಗದು. ಎಲ್ಲರೂ ಅವನನ್ನು ಬಹಳ ಪ್ರೀತಿಸುತ್ತಿದ್ದರು. ಅವನಿಗೆ ತಿನ್ನಲು ಹೊಟ್ಟೆತುಂಬ ಕೊಡುತ್ತಿದ್ದರು. ಅವರಿಗೆ ಹೆದರಿಕೆ

ಯೆಂದರೆ ರಂಜನನು ರೂಢಿ ಸಾಂಪ್ರದಾಯಗಳನ್ನೆಲ್ಲ ಮುರಿದು ಪಾಪಮಾಡಿ ನರಳಲಿರುವನೆಂದು. ಅವನು ಹೊಲೆಯರನ್ನು ಮುಟ್ಟುತ್ತಿದ್ದ, ಅವರೊಡನೆ ಉಣ್ಣುತ್ತಲೂ ಇದ್ದ! ಇದನ್ನು ಅವರು ಕಣ್ಣಾರೆ ನೋಡದಿದ್ದರೂ, ಅವರಂಥ ನೆರೆಕರೆಯ ಹೆಂಗಸರು ಈ ಕುರಿತು ದೊಡ್ಡ ದೊಡ್ಡ ವರದಿಗಳನ್ನು ಮಾಡುತ್ತಿದ್ದರು.

ಚಿತ್ರಾ ರಂಜನನ ಗೆಳತಿ. ಅವನ ರಾಜಕೀಯ ತತ್ವಗಳನ್ನು ಮೆಚ್ಚಿ ಅವನ್ನನುಸರಿಸುತ್ತಿದ್ದವಳು. ಸುಶಿಕ್ಷಿತೆ, ಸುಂದರಿ.

ರಂಜನನ ಹಿಂದಿನ ದಿನಗಳಲ್ಲಿ ಚಿತ್ರಳೊಡನೆ ಅವನಿಗೆ ನಿಕಟವಾದ ಸಂಬಂಧವಿತ್ತು. ಇಬ್ಬರೂ ರಾಜಕೀಯ ಸಾಹಿತ್ಯಗಳನ್ನಭ್ಯಸಿಸಿ ದಿನದಿನವೂ ಚರ್ಚಿಸುವರು. ಪತ್ರಿಕೆಗಳಿಗೆ ಬರೆಯುವರು.

ಚಿತ್ರಳ ಮೂಲವನ್ನು ರಂಜನ್ ಮೊದಲು ಅರಿತಿರಲಿಲ್ಲ. ಅವನು ಅವಳೊಡನೆ ವಿಹರಿಸುತ್ತಿದ್ದ ಸುದ್ದಿ ಅವನ ತಂದೆಯ ಕಿವಿಗೆ ಬಿದ್ದೊಡನೆ ಮನೆಯಲ್ಲಿ ಇಡೀ ಹಾಹಾಕಾರವೆದ್ದಿತ್ತಂತೆ! ಚಿತ್ರ ತಂದೆಯಿಲ್ಲದ ಮಗಳಂತೆ! ಅವಳ ತಾಯಿಯನ್ನು ಊರ ಒಬ್ಬ ಧನಾಢ್ಯರು ಮನೆಯಲ್ಲಿರಿಸಿಕೊಂಡಿದ್ದರಂತೆ. ಅವರಿಗೆ ಚಿತ್ರ ಹುಟ್ಟಿದುದು. ಅವಳ ವಿದ್ಯಾಭ್ಯಾಸಕ್ಕೆ ಬೇಕಾದಷ್ಟು ಹಣವನ್ನು ಅವರು ಕೊಟ್ಟು ತಮ್ಮ ಕುಟುಂಬದವರಂತೆ ರಕ್ಷಿಸುತ್ತಿದ್ದರು. ರಂಜನನ ತಂದೆಗೆ ಇಂಥ ವ್ಯವಹಾರ ತಡೆಯಲಾರದು. ಮನೆಯಲ್ಲಿದ್ದ ಉಳಿದವರಂತೂ ಉರಿ ಕಾರುತ್ತಿದ್ದರು. ರಂಜನ ಆ ವರೆಗೆ ಚಿತ್ರಳ ಹೊರಪರಿಚಯ ಮಾಡಿರಲಿಲ್ಲ. ಅವಳ ಸ್ಥಾನಮಾನಗಳನ್ನೆಂದೂ ಅವನು ವಿವೇಚಿಸಿರಲಿಲ್ಲ, ಅವನಿಗೆ ಅಂತಹ ಆವಶ್ಯಕತೆಯೂ ಆ ವರೆಗೆ ಬಂದಿರಲಿಲ್ಲ.

ಈಗ ಅವಳ ಈ ಸಮಾಚಾರ ಕೇಳಿದೊಡನೆ ರಂಜನನಿಗೆ ಜಿಜ್ಞಾಸೆ ಬಲವಾಯಿತು. ಆದರೆ ಚಿತ್ರ ಅವನ ಹಾರ್ದಿಕ ಗೆಳತಿ. ಅವಳೊಡನೆ ಒಮ್ಮಿಂದೊಮ್ಮೆಯೇ ಇಂಥ ಸ್ಥಾನಮಾನಗಳಿಗೆ ಸಂಬಂಧಿಸಿದ ಸಮಾಚಾರವನ್ನು ಹೇಗೆ ಕೇಳುವದೆಂದು ಅವನಿಗೆ ತಿಳಿಯಲಾಗಲಿಲ್ಲ. ಅವರಿಬ್ಬರೂ ಸ್ಥಾನಮಾನಗಳೆಂದರೆ ತೀರ ಕಾಲ್ಪನಿಕವೆಂದು ಈ ತನಕ ತಿಳಿದಿದ್ದವರು; ಚರ್ಚಿಸಿದ್ದವರು. ಅಲ್ಲದೆ, ಪರಸ್ಪರ ಸಂಬಂಧದಲ್ಲಿ ಅದನ್ನು ತಿಳಿಯುವಷ್ಟರ ಮಟ್ಟಿನ ಅಗತ್ಯ ಅವನದಾಗಲೀ ಅವಳದಾಗಲೀ ದೃಷ್ಟಿಕೋನದಿಂದ ಮೂಡಿರಲಿಲ್ಲ.

ಅವನು ಮನೆಯಲ್ಲಿ ನೋಡುತ್ತಿದ್ದ: ಯಾರಾದರೂ ಪರಿಚಯವಿಲ್ಲದವರು

ಮನೆಗೆ ಬಂದರೆ ಮನೆಯವರು ಮೊತ್ತಮೊದಲು ಕೇಳುವುದು ಜಾತಿ ಏನೆಂದು. ಆ ಮೇಲಿನ ಸತ್ಕಾರಗಳೆಲ್ಲ ಆ ಜಾತಿಯನ್ನು ಹೊಂದಿಕೊಂಡು ನಡೆಯುವುವು. ಅವರಿಗೆ ಹಾಗೆ ವಿಚಾರಿಸಲು ಏನೂ ಸಂಕೋಚವಾಗದು; ದಾಕ್ಷಿಣ್ಯವಾಗದು. ಅವರು ಬೆಳೆದ ಯುಗದ ಗುಣ ಅದು.

ಏನಿಲ್ಲದಿದ್ದರೂ ರಂಜನನಿಗೆ ಅಂದಿನಿಂದ ಚಿತ್ರಳ ಮೇಲೆ ಅಭಿರುಚಿ ಹೆಚ್ಚಿತು. ಚಿತ್ರಳನ್ನು ವೈಯುಕ್ತಿಕವಾಗಿ ಅವನು ಈ ತನಕ ವಿವೇಚಿಸಿರಲಿಲ್ಲ. ಈಗ ಅವಳನ್ನು ಲೋಕದಿಂದ, ಲೋಕದ ಪಾಶದಿಂದ ಬೇರ್ಪಡಿಸಿ, ಒಬ್ಬಂಟಿಗಳನ್ನಾಗಿ ಮಾಡಿ ಚಿತ್ರಗಾರನಂತೆ ನೋಡತೊಡಗಿದ. ಆ ಮೇಲೆ ಅವಳನ್ನು ಹಿಂದೆ ಅವನ ಮುಂದೆ ಮರೆಸಿದ್ದ ಅವಳ ಅಪ್ರತಿಮ ಮೇಧಾಶಕ್ತಿ, ಪಕ್ವವಾದ ಪರಿಶೀಲನಾದೃಷ್ಟಿ, ತೊರೆಯುವ ಹರಿಯುವ ವಾಗ್ಝರಿ ಇವುಗಳ ಮೇಲೆ ಅವನು ಹೆಚ್ಚು ಮನಸ್ಸಿಡಲಿಲ್ಲ ಅವನ ಮನಸ್ಸು ಅವಳಲ್ಲಿ, ಅವಳೊಳಗೇ ನಾಟಿತು.

ಅವಳನ್ನು ಅಂದಿನಿಂದ ಹೆಚ್ಚು ಸಲ ಕಾಣತೊಡಗಿದ. ಹೆಚ್ಚು ಸಲಿಗೆಯಿಂದ ವರ್ತಿಸತೊಡಗಿದ. ತನ್ನವರಂತೆ ಅವಳನ್ನು ಕಾಣಬೇಕೆಂಬ ಹಂಬಲ ದಿನದಿನವೂ ಅವಳಲ್ಲಿ ಹೆಚ್ಚಾಗುತಿತ್ತು. ತಮ್ಮೊಳಗಿದ್ದ ವ್ಯಾವಹಾರಿಕ ರೀತಿಯ ಸಂಬಂಧದ ಮುಖವಾಡವನ್ನು ಕಿತ್ತೊಗೆಯಲು ಕ್ಷಣಕ್ಷಣವೂ ಅವನು ಯತ್ನಿಸುತ್ತಿದ್ದ.

ಒಂದು ದಿನ ಅವಳ ಮನೆಗೇ ಹೋದ. ಅದು ಮೊದಲ ಸಲ ಅವನು ಹೋದುದು. ಆ ವರೆಗೆ ಅವಳಿಗೂ ತನ್ನಂತೆಯೇ ಒಂದು ಮನೆಯಿರಬಹುದೆಂದು ಅವನು ಗ್ರಹಿಸಿರಲಿಲ್ಲ. ಬಹುಶಃ ಹೋಗುವಾಗ ಅವನು ಕಡಿದಾದ ಮನೋಭಾವವನ್ನು ಸೀಳಿ ಮಾರ್ಗಮಾಡಿಕೊಂಡು ಹೋಗಬೇಕಾಗಿತ್ತು. ಆ ವೇದನೆ, ಆ ಎಳೆತ–ಸೆಳೆತ ಅವನಿಗೆ ಅಂದು ಚೆನ್ನಾಗಿ ಅರಿವಾಯಿತು, ಅನುಭವವಾಯಿತು.

ಅವಳ ಮನೆಯ ದಾರಿಯೂ ಅಂತಹದೇ. ಪ್ರತಿಯೊಂದು ಮನೆಯೂ ವಾಸನೆ ಬರುತ್ತಿದೆ. ಮನೆಗಳಲ್ಲಿ ತುಂಬ ಹೆಂಗಸರು ಮತ್ತು ಮಕ್ಕಳು. ಗಂಡಸರಿಲ್ಲ. ಹೊಲಸು ಕಸಗಳು ಮಾರ್ಗದ ಇಕ್ಕಡೆಗಳಲ್ಲಿಯೂ ಇವೆ. ಒಬ್ಬಿಬ್ಬ ಗಂಡಸರು ಬಹಳ ಕ್ಷೀಣವಾಗಿ ಅಸ್ಥಿಪಂಜರದೊಡನೆ ಅಲ್ಲಲ್ಲಿ ಕುಳಿತುಕೊಂಡಿರುವರು. ಕೆಲವರ ನರಳುವ ಸ್ವರ ಕೇಳುತ್ತಿರುವುದು, ಮಕ್ಕಳ ಮೈ

ಬೊಕ್ಕೆಗಳಿಂದ ಕರಗಿಹೋಗಿದೆ. ಹೆಂಗಸರ ಕೃತ್ರಿಮ ನಗು, ಕೆಲವೆಡೆ ಕಾಣು ವುದು, ಆದರೆ ಅವರೆಲ್ಲ ಬಳಲಿದ ಜೀವಿಗಳೆಂದು ಅವರ ಶರೀರಕಾಂತಿ ಹೇಳು ತ್ತಿತ್ತು.

ಒಬ್ಬ ಆಳು ರಂಜನನನ್ನು ಹಿಂಬಾಲಿಸಿಕೊಂಡು ಬಂದು ವಿನಯದಿಂದ ನಮಸ್ಕರಿಸಿದ. ರಂಜನ ಏನೆಂದು ಕೇಳಿದ. ಆಳು ತನ್ನಲ್ಲಿಗೆ ಬರಬಹುದು ಎಂದು ಒಗಟಿನಂತೆ ಹೇಳುತ್ತಾ ಅವರ ಮನೆಯ ಕಡೆ ಬೆರಳು ತೋರಿಸಿದ. ಅಲ್ಲಿ ಇಬ್ಬರು ಚಂದದ ಹೆಂಗಸರು ಅವನನ್ನು ನೋಡುತ್ತ ನಗುತ್ತಿದ್ದರು! ರಂಜನ ಆ ಆಳನ್ನು ಹಿಂದೆಹೋಗಲು ಸನ್ನೆಮಾಡಿ ಮುಂದರಿದ.

ಒಮ್ಮೆ ಅವನು ಕಿಡಿಕಿಡಿಯಾದ. ಮರುಗಳಿಗೆಯಲ್ಲೇ ಅವರೂ ಮನುಷ್ಯ ರಲ್ಲವೇ ಎಂದು ಅವನಿಗೆ ಹೊಳೆಯಿತು. ರಾಜಕೀಯ ತತ್ವ ಹೇಳುತ್ತಿದೆ; ಎಲ್ಲರಿಗೂ ಸಮಾನಹಕ್ಕು ಸರಕಾರದಲ್ಲಿದೆಯೆಂದು; ಆದರೆ ಈ ಜನರಿಗೆ ಅಂಥ ಹಕ್ಕಿನಿಂದ ಏನು ಪ್ರಯೋಜನ, ತಮ್ಮ ಶರೀರವನ್ನೇ ಮಾರಿಕೊಳ್ಳುವ ಇವರು ಇನ್ನು ಹಕ್ಕುಗಳನ್ನಿಟ್ಟುಕೊಂಡಾರೆ – ಇತ್ಯಾದಿ ಅನೇಕ ಪ್ರಶ್ನೆಗಳು ಅವನಲ್ಲಿ ಹೊರಹೊಮ್ಮತೊಡಗಿದುವು.

ಬೋಧಿಸಬೇಕಂತೆ, ಪ್ರಚಾರಮಾಡಬೇಕಂತೆ. ಆದರೆ ಇವರಿಗೆ ಅವು ಗಳಿಂದೇನು ಪ್ರಯೋಜನ? ಇವರು ತಮ್ಮ ಹಕ್ಕು, ತಮ್ಮ ಸ್ವಾತಂತ್ರ್ಯ ಇತ್ಯಾದಿ ಉದಾತ್ತ ವಿಚಾರಗಳ ಕುರಿತು ಯೋಚಿಸಬೇಕಾದರೆ ಈ ಜನ್ಮ ಸಾಲದು, ಈ ಆಯುಷ್ಯ ಸಾಲದು; ಅಷ್ಟರಮಟ್ಟಿಗೆ ಅವರು ಕೆಳಗಿಳಿದುಹೋಗಿರುವರು. ಅವರ ದೇಹದಲ್ಲಿ ಬೆಳಕು ಪೂರ್ಣ ಅಳಿದು ಕತ್ತಲೆ ವಾಸಿಸುತ್ತಿದೆ. ಅವರ ಗ್ರಹಣಶಕ್ತಿ ಆರಿಹೋಗಿದೆ. ದಡ್ಡತನ, ಅಸಡ್ಡೆ, ಇವುಗಳೆಲ್ಲ ಒಟ್ಟುಗೂಡಿ ಪಾಕವಾಗಿ ಅವರನ್ನು ಅನೈತಿಕ ಮಾರ್ಗದಿಂದ ನಡೆಸುತ್ತಿವೆ. ಉದಾತ್ತತೆ ಯನ್ನು ಅವರು ಪೂರ್ಣ ಪ್ರತಿಭಟಿಸಿರುವರು. ಅವರಿಗೆ ಅನ್ನಕ್ಕಿಂತ ಹೆಚ್ಚಿನ ಉದ್ಧಾರ ಬೇಡ.

ಚಿತ್ರಳ ಮನೆ ಬಂತು. ಅದು ಹತ್ತೊಂಬತ್ತನೇ ಶತಮಾನದ ದೊಡ್ಡ ಮಹಡಿಯ ಮನೆ. ಗೋಡೆಯಲ್ಲಿ ಮಾಸಿದ ಚಿತ್ರಪಟಗಳಿವೆ. ಅವುಗಳಲ್ಲಿ ಕೆಲವು ದೇವರವು, ಕೆಲವು ಅರ್ಧನಗ್ನ. ಅಡುಗೆಮನೆಯ ಹೊಗೆ ಎಲ್ಲೆಲ್ಲೂ ಕವಿದಿದೆ. ಜೇಡರ ಬಲೆಗಳಿಗಂತೂ ಲೆಕ್ಕವೇ ಇಲ್ಲ. ಒಂದೆಡೆ ನಾಲ್ಕೈದು ಜನ ಕುಳಿತುಕೊಳ್ಳುವಂಥ ಬೆಂಚು ಇತ್ತು! ಮತ್ತೊಂದೆಡೆ ಚಾಪೆಹಾಕಿತ್ತು.

ಅವನು ಹೋದಾಗ ಚಿತ್ರಳಿರಲಿಲ್ಲ. ಅವಳು ಸ್ನಾನದ ಮನೆಗೆ ಹೋಗಿರುವಳೆಂದು ಅಲ್ಲಿದ್ದ ಒಂದು ಮುದುಕಿ ಹೇಳಿತು. ಆದರೂ ಸತ್ಕಾರಗಳಿಗೇನೂ ಕಡಿಮೆಯಿರಲಿಲ್ಲ. ಮುದುಕಿ ಕುರ್ಚಿಯಲ್ಲಿ ಅವನನ್ನು ಕುಳ್ಳಿರಹೇಳಿ ವೀಳ್ಯದೆಲೆಯ ತಟ್ಟೆಯನ್ನು ತಂದು ಅವನ ಬಳಿಯಲ್ಲಿಟ್ಟಿತು.

ಒಳಗೆ ಯಾರೋ ಮಾತನಾಡುವುದು ಕೇಳುತಿತ್ತು. ಸ್ವಲ್ಪ ತಡವಾದ ಮೇಲೆ ಒಬ್ಬರು ಹೊರಗೆ ಬಂದರು. ಅವರ ಹಿಂದೆಯೇ ಒಂದು ನಡುಹರೆಯದ ಹೆಂಗಸೂ ಹೊರಗೆ ಬಂತು. ರಂಜನ ತನ್ನ ಪರಿಚಯವನ್ನು ಹೇಳಿಕೊಂಡ. ಅವನ ವಿಷಯ ಅವರಿಗೆ ಮುಂಚೆಯೇ ಗೊತ್ತಿತ್ತು. ಚಿತ್ರ ಅವನ ಕುರಿತು ಎಲ್ಲವನ್ನೂ ಆಗಾಗ ಹೇಳಿದ್ದಳು.

ರಂಜನ ಗಂಡಸನ್ನು ಚೆನ್ನಾಗಿ ಬಲ್ಲ. ಅವರು ಹೆಸರುಹೋದ ವ್ಯಾಪಾರಿ. ತುಂಬ ಹಣವುಳ್ಳವರೆಂದು ಪ್ರಸಿದ್ಧಿ ಊರಲ್ಲಿ. ಅಲ್ಲದೆ ಅವರು ಅವನ ತಂದೆಯ ದೊಡ್ಡ ಗೆಳೆಯರು. ಅವರ ಮಗ ರಂಜನನ ಮಿತ್ರ.

ಹೆಂಗಸಿನ ಗುರುತು ಮಾತ್ರ ಅವನಿಗಿರಲಿಲ್ಲ. ಆದರೆ ಮುಖ ನೋಡುವಾಗ ಚಿತ್ರಳ ಮುಖದೊಡನೆ ಹೋಲುತಿತ್ತು. ಅದೇ ಗುಂಗುರು ಗುಂಗುರಾದ ಕೂದಲು, ಅದೇ ಕೆಂಪು ಕೆಂಪಾದ ಅಗಲ ಹಣೆ, ಅದೇ ಉದ್ದವಾದ ಕಪ್ಪು ಹುಬ್ಬು, ಅದೇ ಅಗಲಕಣ್ಣು, ಅದೇ ಕೆಂಪು ತುಟಿ, ಅದೇ ದುಂಡಗಾದ ಮುಖ. ಚಿತ್ರಳ ತಾಯಿಯೆಂದು ರಂಜನನಿಗೆ ಇದರಿಂದ ಖಚಿತವಾಯಿತು. ಬಹುಶಃ ಅವರು ಚಿತ್ರಳ ತಂದೆಯಾಗಿರಬೇಕು.

ಆದರೆ ಅವರನ್ನು ಅವನ ತಂದೆ ಮಹಾ ಧರ್ಮಾತ್ಮನೆಂದು ಪ್ರತಿದಿನವೂ ಹೊಗಳುತ್ತಿದ್ದರು! ದೇವಸ್ಥಾನದಲ್ಲಿ ಪೂಜೆ ಮಹೋತ್ಸವಗಳೆಲ್ಲೆಲ್ಲ ಅವರ ಹೆಸರು ಬಹಳ ಮುಂದು! ಅವರ ಮನೆಯ ಮಡಿಯೆಂದರೆ ಊರಲ್ಲೆಲ್ಲ ಪ್ರಸಿದ್ಧವಾದುದು! ಒಮ್ಮೆ ರಂಜನನೇ ಅವರ ಮನೆಗೆ ಅವರ ಮಗನ ಗೆಳೆತನದಲ್ಲಿ ಹೋಗಿದ್ದ; ಆಗ ಅವರು ಮೊದಲು ಅವನೊಡನೆ ವಿಚಾರಿಸಿದುದು ಅವನು ಯಾವ ಜಾತಿಯವನೆಂದು. ಆ ಮೇಲೆ ಮನೆಯ ಪೂಜೆಯ ಸಡಗರವಂತೂ ಹೇಳತೀರದು.

ಮತ್ತೆ ಚಿತ್ರ ಸ್ನಾನದ ಮನೆಯಿಂದ ಬಂದಳು. ಬಿಸಿನೀರಿನ ಸ್ನಾನವಾಗಿರಬೇಕು. ಅವಳ ಮುಖವೆಲ್ಲ ಕೆಂಪು ಕೆಂಪಾಗಿತ್ತು. ಕೂದಲನ್ನು ಕೆಳಗೆ ಇಳಿಯಬಿಟ್ಟಿದ್ದಳು. ಮೈಗೆ ಅರ್ಧಮರ್ಧ ವಸ್ತ್ರವನ್ನು ಸುತ್ತಿಕೊಂಡಿ

ದ್ದಳು. ಅದರೆಡೆಯಲ್ಲಿ ಅವಳ ನೀಳವಾದ ತೋಳುಗಳು, ಅಗಲವಾದ ಬೆನ್ನು, ಉರುಟುರುಟಾದ ಮೊಣಕಾಲುಗಳು ಕಾಣುತ್ತಿದ್ದುವು. ಅವಳ ಉಬ್ಬಿದ ಎದೆಯಂತೂ ರಂಜನನಿಗೆ ಎಂದೂ ಕಾಣದ ಆಕಾರದಲ್ಲಿ ತೋರಿತು. ಅವಳುಟ್ಟ ತೆಳುವಾದ ಆ ಬಿಳಿ ವಸ್ತ್ರದೊಳಗಿಂದ ಅವಳ ಮೈಯ ರೂಪರೇಷೆ ಮುಸುಕು ಮುಸುಕಾಗಿ ಹೊರಸೂಸುತಿತ್ತು. ಇವೆಲ್ಲ ರಂಜನನ ಮನಸ್ಸಿನಲ್ಲಿ ಹೊಸ ಸೃಷ್ಟಿ, ಹೊಸ ಕನಸುಗಳನ್ನು ಮೂಡಿಸಿದುವು. ಅವನ ಎದೆ ವೇಗವಾಗಿ ಬಡಿಯತೊಡಗಿತು.

ಚಿತ್ರ ರಂಜನನನ್ನು ಕರೆದುಕೊಂಡು ತನ್ನ ಕೋಣೆಗೆ ಹೋದಳು. ಅದು ಸಣ್ಣ ಕೋಣೆ. ಒಂದು ಚಿಕ್ಕ ಮೇಜು, ಒಂದು ಕುರ್ಚಿ, ಮತ್ತೊಂದು ಮಂಚ ಇವಿಷ್ಟೇ ಅಲ್ಲಿಯ ಸಲಕರಣೆಗಳು.

ಅವಳೂ ಮಾತನಾಡಲಿಲ್ಲ. ಅವಳಿಗೆ ಈ ವರೆಗೂ ತನ್ನ ಮನೆಗೆ ಬಾರದ ರಂಜನ ಬಂದುದನ್ನು ನೋಡಿ ದಂಗುಬಡೆದಿರಬೇಕು. ರಂಜನನಂತೂ ದೇಹ ವಿಡೀ ನಡುಗುತ್ತಿದ್ದ. ಅವಳು ಅವನನ್ನು ಕುಳಿತುಕೊಳ್ಳಲು ಸನ್ನೆಮಾಡಿ ಅವಳುಟ್ಟಿದ್ದ ವಸ್ತ್ರವನ್ನು ಬದಲಾಯಿಸಿದಳು. ರಂಜನ ಏನೋ ಒಂದು ಪುಸ್ತಕವನ್ನು ಓದುತ್ತಿದ್ದನಾದರೂ ಅವನ ಮನಸ್ಸೆಲ್ಲ ಅವಳ ಮೇಲೆ ಹರಿದಿತ್ತು. ಅವಳು ಸೀರೆಯುಟ್ಟು ತಲೆಬಾಚಿ ಕಟ್ಟಿದಳು. ಮುಖಕ್ಕೆ ಪೌಡರ್ ಚಿಮು ಕಿಸಿದಳು. ಕೋಣೆಯಿಡೀ ಪರಿಮಳದಿಂದ ತುಂಬಿತು. ಆದರೂ ರಂಜನನಿಗೆ ಅವಳನ್ನು ಕಣ್ಣೆತ್ತಿ ನೋಡುವಷ್ಟರ ಧೈರ್ಯವಿಲ್ಲ.

ಮತ್ತೆ ಅವಳೇ ಮಾತನಾಡಿಸಿದಳು. ಅವನು ಹೇಳಿದ – ಅವಳ ಮನೆಯನ್ನೊಮ್ಮೆ ನೋಡಬೇಕೆಂದು ತಾನು ಬಂದುದೆಂದು. ಅಲ್ಲದೆ ಆ ಮಾರ್ಗದಲ್ಲಿದ್ದ ಜನರ ಜೀವನಕ್ರಮವನ್ನು ನೋಡಿ ತನಗೆ ಅಸಹ್ಯವೂ ಚಿತ್ತಕ್ಷೋಭೆಯೂ ಆಯಿತೆಂದ.

ಚಿತ್ರಳಿಗೂ ಹೇಳಬೇಕೆಂದಿತ್ತು. ಅವಳೂ ರಂಜನನೊಡನಿರುವ ತನ್ನ ಸ್ನೇಹದ ಬೆಳವಣಿಗೆಯನ್ನು ಪರಿಶೀಲಿಸದೆ ಇರಲಿಲ್ಲ. ಅವಳ ಹೀನಾಯಮಾನ ಸ್ಥಿತಿಯಂತೂ ಅವಳಿಗೆ ನಿರಂತರವಾದ ಒಂದು ವ್ಯಥೆಯಾಗಿತ್ತು. ಎಷ್ಟು ತತ್ವ, ಎಷ್ಟು ಸಿದ್ಧಾಂತಗಳನ್ನು ಓದಿದರೂ ತಾನು ಲೋಕದ ದೃಷ್ಟಿಯಲ್ಲಿ ಕೀಳೆಂಬ ಭಾವನೆ ಅವಳಲ್ಲಿಂದ ಕಿತ್ತುಹೋಗುತ್ತಿರಲಿಲ್ಲ. ಬದಲಾಗಿ ಅದು ಇನ್ನೂ ಇನ್ನೂ ಬಲವಾಗುತ ಬರುತಿತ್ತು.

ತನಗೂ ರಂಜನನಿಗೂ ಬೇರೆ ಬೇರೆಯಾಗುವ ಒಂದು ಘಟ್ಟ ಬರಲಿದೆಯೆಂದು ಅವಳು ಹೆದರಿಕೆಯಿಂದ ನಂಬಿದ್ದಳು. ಅವಳ ಕೃತ್ರಮತೆ, ಅವಳ ಕಪಟತನ, ಅವಳ ವಂಚನೆ ಇವೆಲ್ಲ ಅವಳು ಚೆನ್ನಾಗಿ ಅರಿತ ವಿಷಯಗಳೇ. ರಂಜನ ಈಗ ಬಹಳ ಹತ್ತಿರ ಬಂದಿದ್ದ.

ಈಗ ಅವಳ ಪರಿಸ್ಥಿತಿಯನ್ನು, ಅವಳ ಕತೆಯನ್ನು ಅವಳು ಅವನಿಗೆ ತಿಳಿಸದೆ ಉಪಾಯವಿಲ್ಲ. ಹೇಳಿಯೇ ಬಿಟ್ಟಳು: ಅವಳ ತಾಯಿಗೆ ಸಣ್ಣದಿರುವಾಗಲೇ ಮದುವೆಯಾಗಿತ್ತಂತೆ, ತಾಯಿಯ ಗಂಡ ತಾಯಿಯ ಮೇಲೆ ಇಲ್ಲ ಸಲ್ಲದ ಅಪವಾದ ಹೊರಿಸಿ ಅವರ ತವರುಮನೆಗೆ ಅಟ್ಟಿಸಿದರಂತೆ. ತಾಯಿ ಅಪಮಾನದ ಹೆದರಿಕೆಯಿಂದ ಅಲ್ಲಿಗೆ ಹೋಗಲಿಲ್ಲ. ಬದಲಾಗಿ ಪಟ್ಟಣಕ್ಕೆ ಬಂದು ತನ್ನೊಡನಿದ್ದ ಬಂಗಾರವನ್ನೆಲ್ಲ ಮಾರಿ ಒಂದು ಮನೆಮಾಡಿ ಬೇರೆಯವರಲ್ಲಿಗೆ ಕೆಲಸಕ್ಕೆ ಹೋಗುತ್ತ ಜೀವಿಸುತ್ತಿದ್ದಳಂತೆ. ಹೀಗೆಯೇ ಇರುವಾಗ ಕೆಲವು ದಿನಗಳಲ್ಲಿ ಒಬ್ಬ ಧನಾಢ್ಯರು ಅವಳ ಪರಿಚಯಮಾಡಿ ಅವಳಲ್ಲಿ ಹೆಚ್ಚು ಆಸ್ಥೆ ವಹಿಸತೊಡಗಿದರಂತೆ. ಆ ಮೇಲೆ ಅವರೇ ಅವಳಿಗೆ ಈಗಿದ್ದ ಮನೆಯನ್ನು ತೆಗೆಸಿಕೊಟ್ಟಿದ್ದರಂತೆ. ಚಿತ್ರ ಅವರ ಮಗಳು. ರಂಜನನಿಗೆ ಕಣ್ಣೀರು ಉಕ್ಕಿಬಂದಿತ್ತು, ಅವಳ ಮೇಲೆ ಸಹಾನುಭೂತಿ ಮೂಡಿತ್ತು. ಚಿತ್ರಳಿಗೆ ಭಾಷೆಯಿತ್ತ: ತನ್ನ ಸ್ನೇಹ ಎಂದಿಗೂ ಕುಂದದೆಂದು.

ಅವಳು ತಂದ ಫಲಾಹಾರವನ್ನು ತಿಂದ; ರುಚಿರುಚಿಯ ತಿಂಡಿಗಳವು. ಈಗ ಅವನ ಕಣ್ಣು ಅವಳ ಮೇಲೆಯೇ ಇತ್ತು. ಅವಳ ನಗುಮೊಗವನ್ನು ನೋಡಿ ನೋಡಿ ಸಂತೋಷಪಟ್ಟ. ಅವಳ ಸೌಂದರ್ಯ ಅವನ ಹೃದಯವನ್ನು ಬಳಸಿತು.

ಅಂದಿನಿಂದ ಅವರಿಬ್ಬರು ಒಬ್ಬರನೊಬ್ಬರು ನೋಡದ ದಿನವಿಲ್ಲ. ಎಲ್ಲಿ ಚರ್ಚೆ, ಎಲ್ಲಿ ಭಾಷಣಗಳಾಗುವುದಾದರೂ ಒಟ್ಟಿಗೆ ಹೋಗುವರು. ರಂಜನ ತಂದೆಯ ಬುದ್ಧಿವಾದವನ್ನು ಸಂಪೂರ್ಣ ಧಿಕ್ಕರಿಸಿಬಿಟ್ಟಿದ್ದ. ಅವನ ತಂದೆ, ರಂಜನ ದೊಡ್ಡ ಬಲೆಗೆ ಬಿದ್ದನೆಂದು ಹೇಳುವುದರಲ್ಲಿ ಮಾತ್ರ ತೃಪ್ತರಾಗಬೇಕಾಗಿತ್ತು. ಅದಕ್ಕಿಂತ ಹೆಚ್ಚಿಗೆ ಹೇಳಲು ರಂಜನ ಮೊಲೆಹಾಲು ಉಣ್ಣುವ ಸಣ್ಣ ಮಗುವಲ್ಲ.

ಅಷ್ಟರೊಳಗೇ ರಂಜನ ಬಲೆಗೆ ಬಿದ್ದಿರಲಿಲ್ಲ. ಅವನು ಬಿದ್ದುದು ಮತ್ತೊಂದು ದಿನ. ಅಂದು ಅವರಿಬ್ಬರೂ ಒಂದು ಚರ್ಚಾಕೂಟಕ್ಕೆ ಹೋಗಿ

ದ್ದರು. ಬಹಳ ಬಿಗುವಾದ ಚರ್ಚೆ; ಚಿತ್ರಳು ಪ್ರಮುಖವಾದ ಭಾಗ ವಹಿಸಿದ್ದಳು. ಕತ್ತಲೆಯಾಗಿ ರಾತ್ರೆಯಾಯಿತು, ಬೀದಿಗಳಲ್ಲಿ ತಿರುಗುವ ಜನ ಕಡಿಮೆಯಾಯಿತು. ಚರ್ಚೆ ಮುಗಿಯುವಾಗ ಗಂಟೆ ಹತ್ತು ಮೀರಿತ್ತು. ಚಿತ್ರಳೊಬ್ಬಳೇ ಮನೆಗೆ ಹೋಗಬೇಕಿತ್ತು. ಆದರೆ ಅವಳಿಗೆ ಹೆದರಿಕೆ. ರಂಜನನೂ ಒಟ್ಟಿಗೆ ಅವಳ ಮನೆಗೆ ಹೋದ. ಅಲ್ಲಿ ಊಟ ಮಾಡಬೇಕೆಂದು ಅವಳು ಒತ್ತಾಯಪಡಿಸಿದಳು. ನಿರ್ವಾಹವಿಲ್ಲದೆ ಊಟಮಾಡಿದ. ಆ ಮೇಲೆ ಮನೆಗೆ ಹೋಗುತ್ತೇನೆಂದು ಅರೆಮನಸ್ಸಿನಲ್ಲಿ ಹೇಳಿದ. ಚಿತ್ರ ಹೂಂ ಎಂದಳಷ್ಟೆ. ಆದರೂ ಬೀದಿಯ ದೀಪವೆಲ್ಲ ನಂದಿಹೋಗಿತ್ತು. ಮಳೆಯ ಮೋಡಗಳು ಗರ್ಜಿಸುತ್ತಿದ್ದುವು. ಒಳ್ಳೆಯ ಕಾರಣವಾಯಿತು; ರಂಜನನಿಗೆ ಚಿತ್ರಳು ಬೆಳಗಾದ ಮೇಲೆ ಹೋಗಬಹುದೆಂದಳು. ಅವನಿಗೆ ಅವಳು ಪ್ರತ್ಯೇಕವಾಗಿ ಹೇಳುವ ಅವಶ್ಯವಿರಲಿಲ್ಲ.

ಚಿತ್ರ ಅವನಿಗೆ ಹಾಸುಗೆಯನ್ನು ಸರಿಪಡಿಸುತ್ತಿದ್ದಂತೆಯೇ ಮಿಂಚು ಮಳೆಗಳು ವಿಪರೀತವಾಗಿ ಉರಿಯುತ್ತಿದ್ದ ದೀಪವನ್ನು ನಂದಿಸಿದುವು.

ತಂದೆ ಸತ್ತಮೇಲೆ ರಂಜನ್ ಚಿತ್ರಳನ್ನು ಕಾಣುವುದು ಅಪರೂಪವಾಯಿತು. ಅವನ ಪೂರ್ಣ ವ್ಯವಹಾರಿಕ ಜೀವನ ಅವಳನ್ನು ಬಹಳ ದೂರ ಮಾಡಿತ್ತು ಅವನಿಂದ. ಆದರೆ ಅವಳೊಡನೆ ತನ್ನ ಜೀವನವನ್ನು ಕಳೆಯಬೇಕೆಂದು ಅವನು ಕಲ್ಪಿಸಿದ್ದ ಹಿಂದಿನ ಸಂಕಲ್ಪ ಇನ್ನೂ ಜೀವಂತವಾಗಿಯೇ ಇತ್ತು. ಅದನ್ನು ಮಾತ್ರ ಕಾರ್ಯರೂಪಕ್ಕೆ ತರುವಷ್ಟು ಧಾರ್ಢ್ಯತೆ ಅವನಲ್ಲಿರಲಿಲ್ಲ.

ಚಿತ್ರಳಿಗೆ ಅವನ ವರ್ತನೆ ಸರಿಬೀಳಲಿಲ್ಲ. ಅವಳು ಅವನಿಂದ ಬೇರೆಯಾಗಲು ಯತ್ನಿಸಿದಳು. ಅದು ಸುಲಭಸಾಧ್ಯವಿರಲಿಲ್ಲ. ಅವಳಿಗೆ ತಿಳಿದೋ ತಿಳಿಯದೆಯೋ ರಂಜನ್ ಅವಳ ಹೃದಯದಲ್ಲಿ ಬೀಡುಬಿಟ್ಟು ಹಲವು ಕಾಲವಾಗಿತ್ತು. ಅವನ ಸೌಜನ್ಯ, ಅವನ ನಲ್ಮೆ ಇವುಗಳು ಅವಳಿಗೆ ಉಸಿರು ಉಸಿರಿಗೂ ನೆನಪಾಗುವಂಥವು; ಅಲ್ಲದೆ ಅಪವಾದಗಳು ಅವಳನ್ನು ಬಿಗಿಹಿಡಿದಿದ್ದುವು. ಅವೇನಾದರೂ ಬುಡವಿಲ್ಲದ ಅಪವಾದಗಳಲ್ಲೆಂದು ಅವಳಿಗೆ ಸ್ಪಷ್ಟವಾಗಿ ಗೊತ್ತಿತ್ತು.

ಒಂದು ದಿನ ಬೆಳಿಗ್ಗೆ ರಂಜನನಿಗೆ ಕಾಗದ ಬಂತು: ಚಿತ್ರ ಇನ್ನು ಅವನಿಗೆ ನೋಡಸಿಗಲಾರಳಂತೆ! ಅವಳು ಊರುಬಿಟ್ಟು ಹೋಗಿರುವಳಂತೆ. ಅದಕ್ಕಿಂತ

ಹೆಚ್ಚಿನ ಸೋಲು ರಂಜನನಿಗೆ ಬೇರೆ ಇರಲಿಲ್ಲ. ರಂಜನ ವೇದಾಂತಿಯಾಗ ಬೇಕಾಯಿತು. ಚಿತ್ರಳನ್ನು ಮರೆಯುವೆನೆಂದು ಪಣತೊಟ್ಟ, ಅವಳೊಡನೆ ಒಂದು ಲೋಕವನ್ನೇ ಅವನು ಮರೆಯಬೇಕಾಗಿತ್ತು.

ಇತ್ತ ಮನೆಯವರ ಕಾಟ ಸಹಿಸಲಾರ. ದಿನೇ ದಿನೇ ಹೊಸ ಸಮಸ್ಯೆ ಗಳು ಬಂದು ಎದುರು ನಿಲ್ಲುತ್ತಿದ್ದುವು. ಮನೆಯವರ ಹರಿತ ನಾಲಿಗೆಯಿಂದ ಪಾರಾಗಲಾರ. ದಿನಹೋದಂತೆ ಅವನ ಹೃದಯ ನೀರಾಗುತ್ತ ಬರುತಿತ್ತು.

ಅವನ ತತ್ವ, ಅವನ ಧ್ಯೇಯ, ಅವನ ಆದರ್ಶಗಳು ಅವನ ಸಹಾಯಕ್ಕೆ ಈ ನಿರ್ಣಾಯಕ ಸಂಧಿಯಲ್ಲಿ ಬರಲಿಲ್ಲ. ಅವನು ಇತರರ ಕೈಯಲ್ಲಿ ಒಂದು ಸಾಧನವಾಗಿರಬೇಕಾಯಿತು.

ಅವನ ಧ್ಯೇಯವಂತೆ ಸಮಾಜಸುಧಾರಣೆಯಾಗಬೇಕಾದರೆ, ಆ ಯತ್ನ ಮನೆಯಿಂದಲೇ ಮೊದಲಾಗಬೇಕು. ಆದರೆ ಬರೇ ಮೂರು ಜನ ಮುದಿ ಹೆಂಗಸರನ್ನು ಪರಿವರ್ತಿಸಲಾರದವ, ಬೋಧಿಸಿ ಸರಿಯಾದ ಮಾರ್ಗಕ್ಕೆ ತರ ಲಾರದವನು, ಅಂಥ ಸಾವಿರಾರು ಹೆಂಗಸರುಳ್ಳ ಸಾವಿರಾರು ಕುಟುಂಬಗಳುಳ್ಳ ಇಡೀ ಸಮಾಜದ ರೂಪವನ್ನು ಬದಲಿಸಿ ನವಚೇತನವನ್ನು ಅದಕ್ಕೆ ಕೊಡುವ ಸಾಮರ್ಥ್ಯ ಅವನಿಗೆ ಎಲ್ಲಿಂದ ಬರಬೇಕು?

ಅದು ಸತ್ಯಕ್ಕೂ ಕಲ್ಪನೆಗೂ ನಡುವಿರುವ ಅಂತರ. ಬಿಸಿ ರಕ್ತದ ಹುರು ಪಿಗೂ, ತಿಳಿದೂ ತಿಳಿಯದ ವಿವೇಚನೆಗೂ ಮಧ್ಯದಲ್ಲಿರುವ ಗೋಡೆ. ರಂಜನ್ ಹತಾಶನಾದ.

ಅವನು ಯಾವುದನ್ನು ಅಮಾನುಷವೆಂದು ಈ ವರೆಗೆ ತಿಳಿದಿದ್ದನೋ ಅವುಗಳು ಅವನ ಮೂಗಿನಡಿಯಲ್ಲಿಯೇ ದಿನಕ್ಕೆ ಹಲವು ಬಾರಿ ನಡೆಯು ತ್ತಿದ್ದುವು. ಯಾವುದಕ್ಕೆ ತಾನು ತಲೆಬಾಗೆನೆಂದು ಹಿಂದೆ ನಿರ್ಧರಿಸಿದ್ದನೋ ಅವಕ್ಕೆ ಈಗ ಕ್ಷಣ ಕ್ಷಣಕ್ಕೂ ಅಡಿಯಾಳಾಗಿರಬೇಕಾಯಿತು.

ರಂಜನ್ ಇನ್ನೂ ಯುವಕ; ವಯಸ್ಸು ಇಪ್ಪತ್ತೈದು ಮೀರಿರಲಿಲ್ಲ. ಇನ್ನೂ ಅವನ ತಲೆಯಲ್ಲಿ ಕಪ್ಪಾದ ಕೂದಲು, ಬಾಯಿಯಲ್ಲಿ ಬಿಳಿಯಾದ ಹಲ್ಲುಗಳು, ಶಕ್ತಿಯುತ ಅಂಗಾಂಗಗಳು ಇವೆ. ಆದರೆ ಈಗ ಅವನು ಬೈರಾ ಗಿಯ ಜೀವನವನ್ನು ಮೆಚ್ಚಬೇಕಾಯಿತು. ಅವನ ಯಾವ ವಿಮೋಚನ ತನಗೆ ಅವಶ್ಯವೆಂದು ತಿಳಿದಿದ್ದನೋ ಅವೆಲ್ಲ ಆ ಬೈರಾಗಿಯ ಜೀವನದಲ್ಲಿ ಅಡಕ ವಾಗಿತ್ತು.

ಪುನಃ ನೈತಿಕ ಹೊಣೆಗಾರಿಕೆಯ ಯೋಚನೆ: ತನ್ನವರನ್ನು ತಾನು ರಕ್ಷಿಸದಿದ್ದರೆ ತಾನು ಎಂಥ ವೀರ? ಅವರು ಹುಟ್ಟುವಾಗ ಅವನು ತವ್ಮುನ್ನು ಮುದಿವ್ರಾಯದಲ್ಲಿ ರಕ್ಷಿಸಬೇಕೆಂದು ಹರಿಕೆ ಹೊತ್ತಿಲ್ಲ, ನಿಜ. ಆದರೆ ಅವನಿಲ್ಲದಿದ್ದರೆ ಅವರ ಗತಿ ಮತ್ತೇನು? ಚಿತ್ರಳಂತೆ ತಾನೂ ಈ ಕಟು ಸತ್ಯಗಳ ಇದುರಿನಿಂದ ತಪ್ಪಿಸಿಕೊಂಡರೇನು? ಮರಳಿ ನೈತಿಕ ಪ್ರಶ್ನೆಯೇ ಮುಂದುಬರುವುದು.

ಅವನಿಗೆ ಚೆನ್ನಾಗಿ ಗೊತ್ತಿತ್ತು ಅವನು ಹೇಡಿಯಲ್ಲವೆಂದು. ತನ್ನ ಧ್ಯೇಯಕ್ಕಾಗಿ ಎಂಥ ತ್ಯಾಗವನ್ನು ಕೂಡ ಮಾಡುವ ಎದೆಗಾರಿಕೆ ಅವನಲ್ಲಿದೆ. ಅವನ ತಂದೆಯೊಡನೆ ಅನೇಕ ಸಲ ಜಗಳಾಡಿ ಮನೆಯಿಂದ ಹೊರಬೀಳುವ ಆಲೋಚನೆ ಸಹ ಮಾಡಿದ್ದನು. ಮತ್ತೆ ಅವರು ಅವನಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದರು. ಆದರೆ ಈಗ ಮಾಡಬೇಕಾದ ತ್ಯಾಗ ಈ ನೈತಿಕ ಹೊಣೆಗಾರಿಕೆಯನ್ನು ಮಾತ್ರ.

ವೈರಾಗಿಯ ಚಿತ್ರ ಅವನ ಕಣ್ಣಮುಂದೆ ಮರಳಿ ತೇಲಾಡತೊಡಗಿತು ಅದು ಗೌರವ-ಘನಸ್ಥಿಕೆಗಳನ್ನು. ಸುಖ-ದುಃಖಗಳನ್ನು, ಅಂಜಿಕೆ-ಅಸೂಯೆಗಳನ್ನು, ಆಶೆ ನಿರಾಶೆಗಳನ್ನು ತೊಡೆದು ಉನ್ನತವಾದ ಆತ್ಮಶಕ್ತಿಯಿಂದ ಪಾಕವಾದ ಮನಸ್ಸಿನ ಚಿತ್ರ.

ಚಿತ್ರ? ಅವಳಿಗೂ ಅವಳ ತಾಯಿಯನ್ನು ಸಾಕುವ ಹೊಣೆಗಾರಿಕೆ ಇತ್ತು. ಆದರೆ ಆ ಕಾರ್ಯದಲ್ಲಿ ಅವಳು ಶುದ್ಧ ಹೇಡಿಯಾದಳು. ಅವಳಿಗೆ ಧ್ಯೇಯ ಬೇಕಾಗಿತ್ತು. ಆದರೆ ಅವಳ ತಾಯಿ ಅಂಧಕಾರದಲ್ಲಿ ಕುರುಡಳಂತೆ ನರಳುತ್ತಿರುವಳು. ಚಿತ್ರ ಅವಳನ್ನು ಪೂರ್ಣ ಧಿಕ್ಕರಿಸಿಬಿಟ್ಟಳು ಹೆಂಗಸಾಗಿದ್ದರೂ.

ಗಂಡಸಾದ ರಂಜನ್ ಸಾವಿರ ಬಾರಿ ಯೋಚಿಸಿದರೂ, ಅವನಿಗೆ ಉತ್ತರ ದೊರೆತುದು ನೈತಿಕ ಹೊಣಗಾರಿಕೆಯ ಕುರಿತೇ. ಅದೂ ಒಂದು ಸೋಲೇ, ಬಹುಶಃ ಎಂದು ಕೊನೆಗೆ ನಿರ್ಧರಿಸಿದ.